॥ ಶ್ರೀ ಗುರುಸಿದ್ಧಲಿಂಗ ಪ್ರಸನ್ನ ॥



ಆವಾಹ್ಯಾತ್ಮ ಸ್ವರೂಪಾಯ ಶಿವಭಾವಪ್ರದಾಯಿನ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

## ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೯೦೬ಕ್ಕೆ ಸರಿಯಾದ
ಶ್ರೀ ರಕ್ತಾಕ್ಷಿ ನಾಮ ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ | ಪಂಚಮಿ | ಭಾನುವಾರ | 10-2-85 | ವೃಷಭವಾಹನ ಮತ್ತು ಗಜವಾಹನ |
| ,, ,, | ಷಷ್ಠಿ ಸಪ್ತಮಿ | ಸೋಮವಾರ | 11-2-85 | ಹುಲಿವಾಹನ ಮತ್ತು ರಾವಣವಾಹನ |
| ,, ,, | ಅಷ್ಟಮಿ | ಮಂಗಳವಾರ | 12-2-85 | ಮುತ್ತಿನ ಪಾಲಕಿ ಉತ್ಸವ |
| ,, ,, | ನವಮಿ | ಬುಧವಾರ | 13-2-85 | ರುದ್ರಾಕ್ಷಿ ಮಂಟಪೋತ್ಸವ ಮತ್ತು ನವರಂಗ ಪಾಲಕಿ ಉತ್ಸವ |
| ,, ,, | ದಶಮಿ | ಗುರುವಾರ | 14-2-85 | ಬೆಳ್ಳಿ ಪಾಲಕಿ ಉತ್ಸವ |
| ,, ,, | ಏಕಾದಶಿ | ಶುಕ್ರವಾರ | 15-2-85 | ಬಿಲ್ವವೃಕ್ಷವಾಹನ ಮತ್ತು ಅಶ್ವವಾಹನ |
| ,, ,, | ದ್ವಾದಶಿ | ಶನಿವಾರ | 16-2-85 | ಸಿಂಹವಾಹನ ಮತ್ತು ನಂದಿವಾಹನ |
| ,, ,, | ತ್ರಯೋದಶಿ | ಭಾನುವಾರ | 17-2-85 | ಮಹಾ ಶಿವರಾತ್ರಿ ಪೂಜಾದಿಗಳು ಹುತ್ತದವಾಹನ ಮತ್ತು ನವಿಲುವಾಹನ |
| ,, ,, | ಚತುರ್ದಶಿ | ಸೋಮವಾರ | 18-2-85 | ರಥೋತ್ಸವ ಮತ್ತು ತೆಪ್ಪೋತ್ಸವ |
| ,, ,, | ● | ಮಂಗಳವಾರ | 19-2-85 | ಮುತ್ತಿನ ಪಾಲಕಿ ಉತ್ಸವ |
| ,, ,, | ಪಾಡ್ಯಮಿ | ಬುಧವಾರ | 20-2-85 | ಶೇಷವಾಹನ ಮತ್ತು ಪಂಚಬ್ರಹ್ಮೋತ್ಸವ |

ಮತ್ತು ಮಾಮೂಲಿನಂತೆ "ಎತ್ತಿನ ಪರಿಷೆಯೂ" 15-2-85ನೇ ಶುಕ್ರವಾರ "ದನಗಳ ಪ್ರದರ್ಶನವೂ"
ಉತ್ತಮ ರಾಸುಗಳಿಗೆ ಬಹುಮಾನ ವಿನಿಯೋಗವೂ ನಡೆಯುವಂತೆ ಏರ್ಪಡಿಸಿದೆ.
"ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವೂ" ಮತ್ತು ಪ್ರತಿದಿವಸವೂ ಸಾಯಂಕಾಲ
"ಸಾಂಸ್ಕೃತಿಕ ಚಟುವಟಿಕೆಗಳೂ" ನಡೆಯುವಂತೆ ಏರ್ಪಾಡು ಮಾಡಲಾಗಿದೆ.
ಸರ್ವರೂ ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಕೃಪೆಗೆ ಪಾತ್ರರಾಗಬೇಕೆಂದು ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ,
ತುಮಕೂರು ಜಿಲ್ಲೆ, ದಿನಾಂಕ 12-1-1985

ಶ್ರೀ ಶ್ರೀ ಸ್ವಾಮಿಗಳವರು

# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೨ ಫೆಬ್ರವರಿ, ೧೯೮೫

## ಶ್ರೀ ಸಿದ್ಧಗಂಗಾ ಸುಪ್ರಭಾತ

ಮಣ್ಣಿನ ಮಕ್ಕಳೆ ಚಿನ್ಮಯರಾದರು
ಧನ್ಯರಾದರು ದೀನ ದಲಿತ ಜನರು ।
ಸನ್ನುತ ಸಿದ್ಧಲಿಂಗೇಶನ ಕೃಪೆಯಿಂದ
ಮಾನ್ಯವಾಯಿತು ಜಗದಿ ನಿನ್ನ ಹೆಸರು ॥

* * *

ಭರತ ಭೂಮಿಯೊಳಂದು ಹೊಸಯುಗ ಮೊಗವೆತ್ತಿ
ಕರುನಾಡಿಗೊದಗಿತ್ತು ಪರಮೋಚ್ಚಸ್ಥಾನ ।
ಹಿರಿಮೆಯುದ ಧರಿಸಿರುವ ಹಲವು ಕ್ಷೇತ್ರಗಳಲ್ಲಿ
ಹಿರಿದು ನಿನ್ನಯ ಪೆರ್ಮೆಗರಿಮೆ, ಮಾನ ॥

* * *

ಇನ್ನು ತಡೆಯುವುದೇಕೆ ಸಿದ್ಧಗಂಗಾ ಶ್ರೀಯ
ಹೊನ್ನ ಹೊತ್ತರೆ ಮೂಡಿ ಬೆಳಕಾಯಿತು ।
ಉನ್ನತಿಯ ಕರೆ ನೀನು, ಸನ್ಮತಿಯ ಸ್ವರ ನೀನು
ಉನ್ಮನದ ಸಿರಿ ಏಳು ಬೆಳಗಾಯಿತು ॥

* * *

—ಡಾ॥ ಸಿದ್ಧಯ್ಯ ಪುರಾಣಿಕ

# ಈ ಸಂಚಿಕೆಯಲ್ಲಿ

ಲೇಖನದ ಹೆಸರು | ಲೇಖಕರ ಹೆಸರು | ಪುಟ



# ಶ್ರೀವಾಣಿ

ಕುರ್ವನ್ನೇವೇಹ ಕರ್ಮಾಣಿಜಿಜೀವಿಷೇಚ್ಛತಗ್ಂ ಸಮಾಃ ।
ಏವಂ ತ್ವಯೀ ನಾನ್ಯಥಾತೋಽಸ್ತಿನ ಕರ್ಮ ಲಿಪ್ಯತೇನರಃ ॥ —ಈ. ಉ.

ಪರಮಾತ್ಮ ನಿರ್ಮಿತ ಸೃಷ್ಟಿಯು ಚೇತನಾ ಚೇತನವೆಂದು ಎರಡು ವಿಧವಾಗಿದೆ. ಅಚೇತನ ವಸ್ತುಗಳಿಗೆ ಇಂದ್ರಿಯಗಳೂ ತದ್ವಾರ ಆಗುವ ಸುಖದಲ್ಲಿ ಸಂವೇದನವೂ ಇಲ್ಲದಿದ್ದರಿಂದ ಅವುಗಳಿಗೆ ಸ್ಪಷ್ಟ ವ್ಯಕ್ತಿತ್ವವಿಲ್ಲ. ಚೇತನ ಸೃಷ್ಟಿಯಲ್ಲಿ ಮನುಷ್ಯ ಪ್ರಾಣಿಯೇ ಎಲ್ಲಕ್ಕೂ ಹೆಚ್ಚಿನವನು. ಇವನಲ್ಲಿ ಚೈತನ್ಯವೆಂಬುದೊಂದು ಪರಮಾವಧಿಗೆ ಮುಟ್ಟಿದೆ. ಇವನಲ್ಲಿ ಅಪರಿಮಿತ ಸಂವೇದನಾಶಕ್ತಿ ಇದೆ. ಇವನ ಜ್ಞಾನ ಸಾಧನಗಳು ಎಲ್ಲಕ್ಕಿಂತಲೂ ಹೆಚ್ಚು ತೀಕ್ಷಣವಿರುವುವು. ಅವುಗಳ ಸಹಾಯದಿಂದ ಅವನು ಪೂರ್ವಾಪರಾಲೋಚನೆಯಿಂದ ವಿಮರ್ಶೆಮಾಡಿ ತನ್ನ ಪರಮ ಕಲ್ಯಾಣವನ್ನು ಮಾಡಿಕೊಳ್ಳುವ ಲವಲವಿಕೆಯಲ್ಲಿರುವನು. ಆದುದರಿಂದ ಶ್ರೇಷ್ಠಜೀವಿಯಾದ ಮಾನವನು ತನಗೆ ದೊರೆತಿರುವ ಅಲ್ಪಕಾಲದಲ್ಲಿಯೇ ತನ್ನ ಪವಿತ್ರ ಜೀವನವನ್ನು ಸಾರ್ಥಕಗೊಳಿಸಲು ಯತ್ನಿಸಬೇಕು. ಮಾನವನ ಉನ್ನತಿಯು ಅವನು ಮಾಡುವ ಕಾರ್ಯಗಳನ್ನು ಅವಲಂಬಿಸಿದೆ. ಆ ಕಾರ್ಯಗಳು ಸತ್ ಕಾರ್ಯಗಳಾದರೆ, ವ್ಯಕ್ತಿಗೂ, ದೇಶಕ್ಕೂ ಕೂಡಿಯೇ ಹಿತವಾಗುತ್ತದೆ. ಒಳ್ಳೆಯ ಕಾರ್ಯಗಳಿಂದ ಜೀವನವೂ ಪವಿತ್ರವೆನಿಸುತ್ತದೆ. ಈ ಸಂಗತಿಯನ್ನು ಬಸವೇಶ್ವರರು "ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನು, ನಾಲ್ಕು ದಿನ ಬದುಕಿದರೇನು, ಐದು ದಿನ ಬದುಕಿದರೇನೋ" ಎಂದು ಹೇಳಿದ್ದಾರೆ. ಶ್ರೀ ಅರವಿಂದರೂ ಸಹ.

" The earth is a world of life and matter But man is not vegetable not an animal. He is a spirtual and thinking being who is set here to shape and use the animal world for higher purposes with higher motives and for more devine instruments' ಎಂದು ಉದ್ಗರಿಸಿದರು.

ಅಂದರೆ ಈಪೃಥ್ವಿಯು ಚೇತನಾಚೇತನಾತ್ಮಕವಾದ ಪ್ರಪಂಚವು. ಆದರೆ ಮನುಷ್ಯನು ಸಸ್ಯವರ್ಗ ಯಾ ಪ್ರಾಣಿ ವರ್ಗಕ್ಕೆ ಸೇರಿದವನು. ಅವನು ವಿಚಾರಶಕ್ತಿಯುಳ್ಳ ಆಧ್ಯಾತ್ಮಿಕ ಜೀವಿಯು. ಉನ್ನತ ಗುರಿಯುಳ್ಳವನಾಗಿ ಈ ಪ್ರಪಂಚವನ್ನು ಉದಾತ್ತ ಧ್ಯೇಯ ಸಾಧನೆಗಾಗಿ ದೈವತ್ವದ ಆವಿಷ್ಕಾರಕ್ಕಾಗಿ ಬಳಕೆ ಮಾಡಿಕೊಳ್ಳಲು ನಿಯಮಿಸಲ್ಪಟ್ಟಿದ್ದಾನೆ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಡಾ॥ ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಪಿ. ಎಸ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ
1985 ನೇ ಜನವರಿಯಿಂದ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

## ಜಾತ್ರೆಗಳು

ಭಾರತೀಯರ ಬದುಕಿನಲ್ಲಿ ಜಾತ್ರೆಗಳಿಗೆ ಮಹತ್ವದ ಸ್ಥಾನವಿದೆ. ಯಾತ್ರಾ ಪದದ ತದ್ಭವ ರೂಪವೇ ಜಾತ್ರೆ. ಯಾತ್ರೆಯ ಮೂಲ ಉದ್ದೇಶ ಮಾನವ ಪ್ರೀತಿಯ ವಿಸ್ತಾರ. ಬದುಕಿಗೊಂದು ಅರ್ಥ ತಂದುಕೊಳ್ಳುವ ಪ್ರಯತ್ನದಲ್ಲಿ ಅವನು ಕಟ್ಟಿಕೊಂಡು ಬಂದ ಮೆಟ್ಟಲು. ಸಾಂಸ್ಕೃತಿಕ ಹಾಗೂ ಧಾರ್ಮಿಕ ಭಕ್ತಿ ಭಾವಗಳ ಮಧುರ ಸಮ್ಮಿಳನ. ಸಂಘಟನೆಯ ಪ್ರಾಥಮಿಕ ಹಂತ. ವ್ಯಕ್ತಿ ತನ್ನ ಸುಖವನ್ನೂ ಸಂತೋಷವನ್ನೂ ಇತರರೊಂದಿಗೆ ಹಂಚಿಕೊಳ್ಳಲು ಮಾಡಿಕೊಂಡ ವ್ಯವಸ್ಥೆ. ಅಖಂಡ ಭರತಖಂಡದಲ್ಲಿ ಕನ್ಯಾಕುಮಾರಿಯಿಂದ ಹಿಮಗಿರಿಯವರೆಗೆ ಒಂದಲ್ಲ ಒಂದು ರೂಪದಲ್ಲಿ ಯಾತ್ರೆಗಳು ನಡೆದೇ ಇವೆ. ಗ್ರಾಮೀಣ ಬಂಧು-ಭಗಿನಿಯರು ತಮ್ಮ ಬಿಡುವಿನ ಕಾಲವನ್ನು ವ್ಯರ್ಥವಾಗಿ ಕಳೆಯಲಿಚ್ಛಿಸದೆ, ಜಾತ್ರೆ, ಹಬ್ಬ, ಹರಿದಿನಗಳ ಆಚರಣೆಯ ಮೂಲಕ ಜೀವನಕ್ಕೊಂದು ಅರ್ಥ ಕಂಡುಕೊಳ್ಳಲು ಪ್ರಯತ್ನಿಸಿದರು; ಜೀವನವನ್ನು ತನ್ಮೂಲಕ ಅರ್ಥಪೂರ್ಣವನ್ನಾಗಿಸಿದರು; ಸುಂದರಗೊಳಿಸಿದರು.

ಕರ್ನಾಟಕದಲ್ಲಿ ನಡೆಯುವ ಜಾತ್ರೆಗಳಿಗೆ ತಮ್ಮದೇ ಆದ ಸ್ಥಳ ಪುರಾಣಗಳುಂಟು, ಐತಿಹ್ಯಗಳುಂಟು, ಹಿನ್ನೆಲೆಯುಂಟು. ಒಂದೊಂದು ಜಾತ್ರೆಯ ಹಿಂದೆಯೂ ಭಾರತೀಯ ಪೌರಾಣಿಕ ಸಂಬಂಧವಂತೂ ಇದ್ದೇ ಇದೆ. ದೇವ-ದೇವಿಯರ, ಸಂತರ, ಶರಣರ ಹೆಸರಿನಲ್ಲಿ ಜಾತ್ರೆಗಳು ಬೆಳೆದು ಬಂದಿವೆ. ನಮ್ಮ ಹಿರಿಯರು ತಮ್ಮ ಸಂಸ್ಕೃತಿಯಲ್ಲಿ ದೀಪದ ಹೆಜ್ಜೆಗಳನ್ನು ಬಿಟ್ಟುಹೋದವರ ಕೃತಜ್ಞತೆಯ ಕುರುಹಾಗಿ ಜಾತ್ರೆಗಳನ್ನು ನಡೆಸಿಕೊಂಡು ಬಂದಿದ್ದಾರೆ.

ಹನ್ನೆರಡನೆಯ ಶತಮಾನ ವಿಶ್ವದ ಇತಿಹಾಸದಲ್ಲಿಯೇ ಉಜ್ವಲವಾದ ಕಾಲ. ಅಸಂಖ್ಯಾತ ಶರಣ-ಶರಣೆಯರನ್ನು ಕಂಡ ಭಾಗ್ಯ ಆ ಯುಗದ್ದು — ಅದೂ ಕರ್ನಾಟಕದಲ್ಲಿ. ಅಂಥ ಅನೇಕ ಶರಣರ ಜಾತ್ರೆಗಳಿಂದು ನಾಡಿನುದ್ದಗಲದಲ್ಲಿ ನಡೆದಿವೆ. ಅಂತೆಯೇ ಅವರು ನಡೆದ ಹಾದಿಯಲ್ಲಿ ನಡೆಯುವ ಹಂಬಲವನ್ನು ನೆನಪಿಗೆ ತರುತ್ತವೆ. ಶ್ರೀ ಸಿದ್ಧಗಂಗಾ ಮಠದಲ್ಲಿ ಶಿವರಾತ್ರಿಯ ಸಂದರ್ಭದಲ್ಲಿ ನಡೆಯುವ ಜಾತ್ರೆಗೂ ಅಂಥ ಪವಿತ್ರ ಹಿನ್ನೆಲೆಯಿದೆ. ಶ್ರೀ ಸಿದ್ಧಲಿಂಗೇಶ್ವರರ ತಪೋಜೀವನದ ಪುಣ್ಯಸ್ಮರಣೆ, ಆ ಶಿವಯೋಗಿಗಳು ಬಿತ್ತಿಹೋದ ಜೀವನ ಸಂದೇಶಗಳ ಪ್ರಸಾರಕ್ಕಾಗಿ ಜಾತ್ರೆ ಪ್ರಾರಂಭ

ವಾಯಿತು. ಪರಮ ಪೂಜ್ಯ ಶಿವಯೋಗಿ ಉದ್ದಾನಸ್ವಾಮಿಗಳವರ ಉದಾತ್ತ ಭವ್ಯ ದರ್ಶನದ ಫಲವಾಗಿ 1910 ರಲ್ಲಿ, ಎಪ್ಪತ್ತೈದು ವರ್ಷಗಳ ದೀರ್ಘ ಹಾದಿಯಲ್ಲಿ ವೈವಿಧ್ಯಪೂರ್ಣವಾಗಿ ನಡೆದು ಬಂದಿದೆ ಜಾತ್ರೆ. ಜನ - ಜಾನುವಾರುಗಳ ಜಾತ್ರೆ. ಅಖಂಡ ಕರ್ನಾಟಕದಲ್ಲಿ ಇಡೀ ಜಾತ್ರೆಗೇ ಅನ್ನ ದಾಸೋಹ ಮಾಡುತ್ತಿರುವ ಏಕೈಕ ಜಾತ್ರೆ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ. ಶ್ರೀ ಕ್ಷೇತ್ರದ ಅಧ್ಯಕ್ಷರಾದ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಸ್ವಾಮಿಗಳವರ ಅಖಂಡ ಸೇವಾ ಮಣಿಹಕ್ಕೆ ಜ್ವಲಂತ ಉದಾಹರಣೆ ಜಾತ್ರೆ. ಅನ್ನದಾಸೋಹ, ಜ್ಞಾನದಾಸೋಹ, ವಿದ್ಯಾದಾಸೋಹಕ್ಕೆ ಹೆಸರಾಗಿದೆ. ಶ್ರೀ ಕ್ಷೇತ್ರದ ಅಧಿಪತಿ ಸಿದ್ಧಲಿಂಗೇಶ್ವರರ ವಿವಿಧ ಉತ್ಸವಗಳು ಒಂದು ಮುಖವಾದರೆ, ವಸ್ತುಪ್ರದರ್ಶನ ಮತ್ತೊಂದು ವೈಚಾರಿಕ, ವೈಜ್ಞಾನಿಕ ಮುಖ. ಜ್ಞಾನ, ವಿಜ್ಞಾನಗಳ, ಪ್ರಾಚೀನ - ಅರ್ವಾಚೀನಗಳ ಮಧುರ ಸಂಗಮ. ಶ ರ ಣ ಪರಂಪರೆಯ "ಸಿದ್ದಗಂಗಾ" ಸೇವಾಮುಖ, ಕಾಲಧರ್ಮಕ್ಕನುಗುಣವಾಗಿ ಜಾತ್ರೆ ಯಂಥ ಸಾಂಸ್ಕೃತಿಕ ಸಂಘಟನೆಯನ್ನು ರೂಪಿಸಬೇಕೆಂಬ ದಿವ್ಯಾಕಾಂಕ್ಷೆ ಪೂಜ್ಯ ಶ್ರೀ ಶ್ರೀ ಗಳವರಿಗೆ. " ಕಲೆಯನಲ್ಲದೆ ಶಿಲೆಯನೇಂ ರೂಪಿಸುವನೆ ಶಿಲ್ಪಿ". ಜೀವನಕ್ಕಿಂತ ಮಿಗಿಲಾದ ಕಲೆಯಿಲ್ಲ ಎಂಬುದನ್ನು " ಮರ್ತ್ಯದ ಕರ್ತಾರನ ಕಮ್ಮಟ " ದಲ್ಲಿ ಸಾಧಿಸಿ ತೋರಿಸಿದ್ದಾರೆ 'ದೇ ವ ಶಿ ಲ್ಪಿ'.

# ಚಿಂತನ-2

—ವಿದ್ವಾನ್ ಎಸ್. ಷಡಕ್ಷರಿ, Bsc.M.A., B.ed

ಇಂದಿನ ಚಿಂತನದ ವಸ್ತು "ಲೋಭಿತನ" ವನ್ನು ಕುರಿತದ್ದು. ಇವತ್ತಿನ ದಿನ ಹಣ-ಆಸ್ತಿ ಸಂಪಾದನೆಗಾಗಿ ಜನ ಹಲವಾರು ಮಾರ್ಗಗಳನ್ನು ಕಂಡುಕೊಂಡಿದ್ದಾರೆ. ಕೆಲವರು ಧರ್ಮಮಾರ್ಗದಲ್ಲಿ ಮತ್ತೆ ಕೆಲವರು ಅಧರ್ಮಮಾರ್ಗದಲ್ಲಿ ಸಂಪಾದಿಸುತ್ತಾರೆ. ಕೆಲವರು ಯೋಗ್ಯ ರೀತಿಯಲ್ಲಿ ಸದುಪಯೋಗಪಡಿಸಿದರೆ ಮತ್ತೆ ಕೆಲವರು ಲೋಭಿತನದಿಂದ ಸಂಪಾದಿಸಿ ಲೋಭಿಗಳಾಗಿಯೇ ಸಾಯುತ್ತಾರೆ.

ಇಲ್ಲಿ ಒಂದು ಪ್ರಸಂಗ ಜ್ಞಾಪಕಕ್ಕೆ ಬರುತ್ತದೆ. ಕೆಲವು ವರ್ಷಗಳ ಹಿಂದೆ ಎಲ್ಲಿಂದಲೋ ಒಬ್ಬ ವ್ಯಕ್ತಿ ನಮ್ಮೂರ ಬಳಿ ಬಂದು ನೆಲೆಸಿದ. ಆತ ನೋಡುವವರಿಗೆ ಫಕೀರನಂತೆಯೇ ಕಾಣುತ್ತಿದ್ದ. ಹೀಗೆ ನಾಲ್ಕಾರು ವರ್ಷ ಸುತ್ತಮುತ್ತಲ ವಾತಾವರಣ, ಜನಸ್ವಭಾವ, ವ್ಯವಹಾರ ಎಲ್ಲವನ್ನೂ ಚನ್ನಾಗಿ ಅರ್ಥಮಾಡಿಕೊಂಡ. ಕೊನೆಗೆ ಇವನು ಹಣವಂತ ಕಡು ಲೋಭಿ ಎಂಬುದು ಎಲ್ಲರಿಗೂ ತಿಳಿಯಿತು. ಹಣ ಸಂಪಾದನೆಯ ಆಸೆಗಾಗಿ ಶ್ರೀಸಾಮಾನ್ಯರಿಗೆ ಬಡ್ಡಿಗಾಗಿ ಹಣ ಸಾಲಕೊಡುತ್ತಿದ್ದ. ಬಡ್ಡಿ ಹಣ ಕೊಡದಿದ್ದರೆ ದವಸ-ಧಾನ್ಯ ಇಲ್ಲವೆ ಒಡವೆ, ವಸ್ತು, ಆಸ್ತಿ-ಪಾಸ್ತಿಗಳನ್ನು ಜಮಾ ಮಾಡಿಕೊಳ್ಳುತ್ತಿದ್ದ, ಸಾಕಷ್ಟು ಹಣ ಸಂಪಾದನೆಯು ಆಯಿತು, ಯಾವ ಧರ್ಮಕಾರ್ಯಕ್ಕೂ ಒಂದು ಪೈಸೆ ಕೊಟ್ಟವನಲ್ಲ. ಪರಾರ್ಥಕ್ಕೆ ಪೈಸೆ ತೋರಿಸಿದವನೇ ಅಲ್ಲ, ದುರಾಸೆ ಬೆಳೆಯಿತು, ಕೃಪಣನಾದ, ನೆರೆಊರಿನ ಕೆರೆ ಅಂಗಳದ ಗೋಮಾಳವನ್ನು ಕಂಡ, ಹೆದ್ದಾರಿಯ ಪಕ್ಕದಲ್ಲಿರುವ ಇದನ್ನು ಹೇಗಾದರೂ ಲಪಟಾಯಿಸಬೇಕೆಂದು ಲೋಭಿತನ ಬಂತು. ಇದ್ದಕ್ಕಿದ್ದಹಾಗೆಯೆ ಒಂದು ದಿನ ಇದು ನಮ್ಮ ತಾತನ ಆಸ್ತಿ ಎಂದು ಲಂಚಲಂಪಟದ ಕಾರ್ಯಕರ್ತನನ್ನು ಹಿಡಿದು ಹೇಗೋ ಕೆಲವು ವರ್ಷಗಳ ನಖಲು ದಾಖಲೆಯಗ್ನು ತಂದ. ಊರಿನಲ್ಲಿ ಕೆಲವರಿಗೆ ಆಶ್ಚರ್ಯ, ಗಾಬರಿ ಆಗ ಇವನಲ್ಲಿದ್ದ ಆ ಲೋಭವನ್ನು ಕಂಡಾಗ ಹೀಗನ್ನಿಸುತ್ತದೆ.

ಜೀವನ ನಡೆಯಬೇಕಾದರೆ ಹಣ-ಆಸ್ತಿ ಅಗತ್ಯ ಆದರೆ ಅದನ್ನು ಧರ್ಮಸಮ್ಮತವಾದ ದಾರಿಯಲ್ಲಿ ಸಂಪಾದಿಸಿ ಸದುಪಯೋಗ ಮಾಡಬೇಕು. ಹಣ ಜೀವನಕ್ಕೆ ಒಂದು ಸಾಧನವೇ ಹೊರತು, ಅದೇ ಬದುಕಿನ ಸಿದ್ಧಿಯಲ್ಲ. ಸಾಮಾನ್ಯವಾಗಿ ಹಣ ಗಳಿಸುತ್ತಾ ಗಳಿಸುತ್ತಾ ಅದರ ಮೇಲೆ ಅಮಿತವಾದ ಲೋಭ ಹುಟ್ಟಿ ಜನ ಹಣವನ್ನು

ವೆಚ್ಚ ಮಾಡಲು ಒಪ್ಪರು. ಮನೆಗೆ ಬಂದ ಲಕ್ಷ್ಮಿ ಮನೆಯಲ್ಲೆ ಇರಲೆಂದು ಬಯಸಿ, ತಮ್ಮ ಸ್ವಂತ ಹಿತವನ್ನು ಅಲಕ್ಷ್ಯ ಮಾಡಿ ಕೃಪಣರಾಗುತ್ತಾರೆ. ಕಡೆಗೆ ತಮ್ಮ ತಮ್ಮವರ ಊಟ ಉಪಚಾರಗಳಿಗೂ ಸಂತೋಷದಿಂದ ಧಾರಾಳವಾಗಿ ವೆಚ್ಚಮಾಡಲಾರರು. ತಾನೂ ತಿನ್ನದೆ ಜಗಳವಾಡಿ ನೆಂಟರನ್ನು ಹತ್ತಿರ ಸೇರಿಸದೆ ಹೊಲದಲ್ಲಿ ನಿಲ್ಲಿಸಿದ ದೃಷ್ಟಿ ಬೊಂಬೆಯಂತೆ ಇರುತ್ತಾರೆ ಈ ಲೋಭಿಗಳು. ತಮಗೆ ಎಷ್ಟು ಹಣ ಲಭಿಸಿದರೂ ಸುಖ ಪಡೆಯಲಾರರು, ಹಣ ಹೇರಳವಾಗಿದ್ದರೂ ಕಡುಬಡವರಂತೆ ಬಾಳುವರು, ಹಣ ಪ್ರಾಪ್ತಿಯಿಂದ ಧನಾಕಾಂಕ್ಷೆ ಹೆಚ್ಚುವುದೇ ಅಲ್ಲದೆ, ಮನುಷ್ಯರಲ್ಲಿ ಲೋಭಿತನವೆಂಬ ದುರ್ಗುಣವನ್ನು ಹುಟ್ಟಿಸುತ್ತದೆ. ಈ ಲೋಭಕ್ಕೆ ಒಳಗಾದವನು ಧನಾರ್ಜನೆಯಲ್ಲಿ ನ್ಯಾಯಾನ್ಯಾಯಗಳನ್ನಾಗಲಿ, ಪಾಪಪುಣ್ಯಗಳನ್ನಾಗಲಿ ಗಮನಿಸದೆ ವರ್ತಿಸುತ್ತಾರೆ. ಅಂಥವರು ಪರದ್ರವ್ಯಾಪಹರಣಕ್ಕೂ ಹಿಂತೆಗೆಯುವುದಿಲ್ಲ. ತನಗೆಷ್ಟು ಭಾಗ್ಯವಿದ್ದರೂ ಲೋಭಿಗಳಿಗೆ ಪಕ್ಕದವರ ಸೊತ್ತನ್ನು ಅಪಹರಿಸುವ ಆಸೆ ಹೆಚ್ಚು. ಲೋಭ ಎಂಥ ಭಾಗ್ಯವಂತರನ್ನೂ ನಿರ್ಲಜ್ಜರನ್ನಾಗಿ ಮಾಡುತ್ತದೆ. ಅವರು ಏನು ಮಾಡುವುದಕ್ಕೂ ಹೇಸರು, ಲೋಭಿತನ ಇರುವವರಿಗೆ ಕರುಣೆ ಇರುವುದಿಲ್ಲ.

ಮಾತರಂ ಪಿತರಂ ಪುತ್ರಂ ಭ್ರಾತರಂ ವಾ ಸುಹೃತ್ತಮಂ।
ಲೋಭಾವಿಷ್ಟೋ ನರೋಹಂತಿ ಸ್ವಾಮಿನಂ ವಾ ಸಹೋದರಂ॥

ತಾಯಿಯನ್ನು, ತಂದೆಯನ್ನು, ಮಗನನ್ನು, ದಾಯಾದಿಯನ್ನು ಮತ್ತು ಒಳ್ಳೆಯ ಮಿತ್ರನನ್ನು, ಒಡೆಯನನ್ನು ಅಥವಾ ಒಡ ಹುಟ್ಟಿದವನನ್ನು ಲೋಭಿಯಾದವನು ಕೊಲ್ಲುತ್ತಾನೆ. ಕೌರವನು ಪಾಂಡವರನ್ನು ಅರಗಿನ ಮನೆಯಲ್ಲಿಟ್ಟು ಬೆಂಕಿ ಇಟ್ಟದ್ದು, ಮುಂಜರಾಜನು ಅಣ್ಣನ ಮಗ ಬೋಜನನ್ನು ಕೊಲೆಮಾಡಲೆತ್ನಿಸಿದ್ದು ಲೋಭಿತನದಿಂದಲೇ ಅಲ್ಲವೆ? ಐಶ್ವರ್ಯವನ್ನು ಅನುಭವಿಸುವ ಭಾಗ್ಯ ಲೋಭಿಗಳಿಗೆ ದಕ್ಕದು. ಜೇನುನೊಣ ಕಷ್ಟಪಟ್ಟು ಜೇನನ್ನು ಸಂಗ್ರಹಿಸಿ ಕಂಡವರ ಪಾಲು ಮಾಡಿ ಹಾರಿಹೋಗುವುದಿಲ್ಲವೆ? ಲೋಭಿಗೆ ಧನವೇ ಪ್ರಾಣ, ಅವನು ಅದನ್ನು ಕೊಟ್ಟು ಬದುಕಲಾರನಂತೆ ಲೋಭಿತನವುಳ್ಳವರನ್ನು ಏನನ್ನು ಪ್ರಾರ್ಥಿಸಿದರೂ ಲಾಭವಿಲ್ಲ. ಗೊಡ್ಡು ಆಕಳ ಹಾಲು ಕರೆಯಲು ಮಡಕೆಯನ್ನು ಕೊಂಡುಹೋದರೆ ಅದು ಹಲ್ಲು ಉದುರುವ ಹಾಗೆ ಒದೆಯುವುದೇ ಹೊರತು ಹಾಲು ಕೊಡದು, ಹಾಗೆಯೇ ಲೋಭಿಯಿಂದ ಉತ್ಸಾಹ ಭಂಗವೇ ಆಗುತ್ತದೆ.

ಮನುಷ್ಯ ಜೀವನದಲ್ಲಿ ಎಷ್ಟು ಲೋಭವಿರುತ್ತದೋ ಅಷ್ಟೇ ಅವನಲ್ಲಿ ಅನೀತಿ ಮತ್ತು ಭ್ರಷ್ಟಾಚಾರ ಬೆಳೆಯುತ್ತದೆ. ಲೋಭಿತನ ಬೆಳೆದಷ್ಟು ತನ್ನ ಸ್ವಹಿತವನ್ನು ಸಾಧಿಸಲು ಅನೀತಿಯ ವಿಧಾನಗಳನ್ನು ಬಳಸುವ ಪ್ರವೃತ್ತಿಯೂ ಅವನಲ್ಲಿ ಬಲಿಯುತ್ತದೆ. ಲೋಭವಿಲ್ಲದೆ ಮನುಷ್ಯ ಕೆಟ್ಟತನಕ್ಕೆ ಕೈಹಾಕುವುದೇ ಇಲ್ಲ ಮತ್ತು ಅವನ ಶೀಲಕ್ಕೆ ಕಳಂಕ ಬರುವುದೇ ಇಲ್ಲ.

(9-11-84 ರ ಬೆಂಗಳೂರು ಆಕಾಶವಾಣಿ ಕೃಪೆಯಿಂದ ಪ್ರಸಾರವಾದುದು.)

[ಮುಂದುವರಿದ ಲೇಖನ]

# ಬಸವಣ್ಣನವರು-೧೨

—ಡಿ॥ ಅ. ನ. ಕೃಷ್ಣರಾಯರು

ಕಲ್ಯಾಣದ ಮಹಾಕ್ರಾಂತಿಯಿಂದ ಬಸವಣ್ಣನವರು ಉದ್ದೇಶಪಟ್ಟಿದ್ದ ರಚನಾತ್ಮಕ ಕಾರ್ಯ ಕಲಾಪ ತತ್ಕಾಲಕ್ಕೆ ಕೊನೆಗೊಂಡಂತೆ ಆಯಿತು. ಅಣ್ಣನವರು ಅದೇ ಮನೋರೋಗದಿಂದ ಕ್ರಿ.ಶ. ೧೧೬೮ ತಮ್ಮ ೩೬ನೆಯ ವಯಸ್ಸಿನಲ್ಲಿ ಲಿಂಗೈಕ್ಯರಾದರು.

**ಉಪಸಂಹಾರ**

ಸತ್ಯಕ್ಕೆ ಚ್ಯುತಿಯಿಲ್ಲ, ಮೃತಿಯಿಲ್ಲ ಎಂದು ಅವರು ಹೇಳಿದ ಮಾತು ನಿತ್ಯವಾಯಿತು. ಅವರು ಸ್ಥಾಪಿಸಿದ ಧರ್ಮ ತತ್ವಗಳು ಭರತಖಂಡದ ಮೂಲೆ ಮೂಲೆಗಳನ್ನು ಹೊಕ್ಕು ಬೆಳಗಿತು. ೧೫ನೆಯ ಶತಮಾನದಲ್ಲಿ ಪ್ರೌಢದೇವರಾಯನ ಆಳ್ವಿಕೆಯಲ್ಲಿ ವಿಜಯನಗರದಲ್ಲಿ ಮತ್ತೆ ಕಲ್ಯಾಣ ಸ್ಥಾಪಿತವಾಯಿತು. ಅದೇ ಶಿವಾನುಭವ ಮಂಟಪ ಮತ್ತೆ ಚಿಗುರಿತು. ನೂರೊಂದು ವಿರಕ್ತರು ಬಸವಣ್ಣನವರ ಸಂದೇಶವನ್ನು ಕರ್ನಾಟಕದ ಎಲ್ಲ ಕಡೆಗಳಿಗೂ ಒಯ್ದು ಶಿವಕುಲವನ್ನು ಬೆಳಸಿದರು. ಬಸವಣ್ಣನವರು ಲಿಂಗೈಕ್ಯರಾಗಿ ಇಂದಿಗೆ ಎಂಟು ಶತಮಾನಗಳಾಗುತ್ತ ಬಂದಿದೆ. ಇಂದಿಗೂ ಅವರ ಧರ್ಮ ಜಾಜ್ವಲ್ಯಮಾನವಾಗಿ ವಿರಾಜಿಸುತ್ತಿದೆ. ಅವರು ಆಡಿದ ಮುತ್ತಿನಂಥ ಮಾತುಗಳು ವೀರಶೈವೇತರರ ಹೃದಯಗಳಲ್ಲಿಯೂ ಬೆಳಕನ್ನು ಹೊತ್ತಿಸುತ್ತಿವೆ. ಅವರ ವಚನವಾಣಿ ಕಡಲಾಚೆ ಕೂಡ ಹೋಗಿ ಜ್ಞಾನಪ್ರಸಾರ ಮಾಡುತ್ತಿದೆ

ಯಾವ ಮತಾಚಾರ್ಯರೂ ಉದ್ದೇಶಪಡದಂತಹ ಅಗಾಧವಾದ ಕೆಲಸವನ್ನು ಬಸವಣ್ಣನವರು ನಿಯೋಜಿಸಿಕೊಂಡು ಕೇವಲ ಒಂಭತ್ತು ವರ್ಷಗಳಲ್ಲಿ ಅದರ ಬಹುಬಹು ಭಾಗವನ್ನು ಸಾಧಿಸಿ ತೋರಿಸಿದರು. ಸಮಾಜ, ಧರ್ಮ, ಸಾಹಿತ್ಯ ಈ ಮೂರು ಅಶ್ವಗಳನ್ನು ಹೂಡಿದ ಬೃಹತ್ ರಥದ ಸಾರಥಿಯಾಗಿ ಅವರು ನಿಂತರು. ಬಸವಣ್ಣನವರ ಮಾನದಂಡದಿಂದ ಅವರ ಕೆಲಸ ಸಂಪೂರ್ಣ ಫಲಕಾರಿಯಾಗಿಲ್ಲವೆಂದು ಹೇಳಬಹುದಲ್ಲದೆ ನಮ್ಮ ಮಾನದಂಡದಿಂದಲ್ಲ. ಅವರ ಕೆಲಸಗಳ ಒಂದೊಂದು ಭಾಗವನ್ನು ನಾವು ಹಿಡಿದರೂ ಒಂದೊಂದು ಜನ್ಮವನ್ನೇ ಅದಕ್ಕೆ ನಿವೇದಿಸಬೇಕಾಗುತ್ತದೆ.

ಧರ್ಮ ಒಂದೇ. ದೇವರು ಒಬ್ಬನೇ. ಅವನಿಗೆ ಹಲವು ನಾಮ ರೂಪಗಳಿವೆ. ಆದರೆ ಸಾಧಕ ಹಲವು ನಾಮರೂಪಗಳ ನೆನಹಿನಲ್ಲಿ ತನ್ನ ಕ್ರಿಯಾಜ್ಞಾನ ಶಕ್ತಿಯನ್ನು

ದುರ್ವಿನಿಯೋಗ ಮಾಡುತ್ತಾನೆ. ಪರಮಾತ್ಮನನ್ನು ಲಿಂಗಸ್ವರೂಪಿಯಾಗಿ ಕಂಡು, ಯೋಗ್ಯ ಸಂಧಾನದಿಂದ ತಾನೂ, ಲಿಂಗವೂ ಒಂದೇ ಎಂಬ ಪರಿಜ್ಞಾನವನ್ನು ಪಡೆಯ ಬೇಕು. ಇವಕ್ಕೆ ಭಕ್ತಿಯೂ ಬೇಕು, ಕರ್ಮ, ಜ್ಞಾನಗಳೂ ಬೇಕು ಎಂಬ ಸಮನ್ವಯ ಸಿದ್ಧಾಂತದ ಆಚಾರ್ಯ ಪುರುಷರಾಗಿ ಬಸವಣ್ಣನವರು ಸಕಲ ಧರ್ಮಗಳ ಸಾರವನ್ನು ವೀರಶೈವ ಧರ್ಮದಲ್ಲಿ ಅಡಕಮಾಡಿದರು. ಅವರ ಧರ್ಮದೃಷ್ಟಿ ಕೇವಲ ಗ್ರಾಂಥಿಕ ವಾದುದಲ್ಲ. ಅನುಭಾವಕ್ಕೆ ವಿಶೇಷ ಮಹತ್ವಕೊಟ್ಟು ಜೀವನದಲ್ಲಿ ಧರ್ಮವನ್ನು ಅನು ಸಂಧಾನ ಮಾಡುವ ಬಗೆಯನ್ನು ತಮ್ಮ ಆದರ್ಶದ ಮೂಲಕವೂ, ಅನುಭವ ಮಂಟಪ ದ ಶಿವಶರಣರ ಆದರ್ಶ ಅನುಭವಗಳ ಮೂಲಕವೂ ತೋರಿಸಿಕೊಟ್ಟರು. ಜೀವನದ ಸರ್ವತೋಮುಖ ಪ್ರಗತಿಯನ್ನು ಗುರಿಯಾಗಿಟ್ಟುಕೊಂಡ ಬಸವಣ್ಣನವರು ಸಮಾಜ ವನ್ನು ಮರೆಯದೆ ಅದರ ಲೌಕಿಕ ಪ್ರಗತಿಗೂ ಆಧ್ಯಾತ್ಮದ ಬುನಾದಿ ಬೇಕೆಂದು ಸಾಧಿಸಿ ತೋರಿಸಿದರು. ಸಮಾಜದ ಕಿಲ್ಬಿಷಗಳನ್ನು ಅಂಜದೆ, ಅಳುಕದೆ, ನಾಚದೆ ತೊಳೆದರು.

ಇತರ ಮತಾಚಾರ್ಯರಂತೆ ಬಸವಣ್ಣನವರು ದೊಡ್ಡ ಆಧ್ಯಾತ್ಮ ಗ್ರಂಥಗಳನ್ನಾ ಗಲೀ, ಸೂತ್ರ ಭಾಷ್ಯಗಳನ್ನಾಗಲೀ, ರಾಮಾಯಣ ಭಾರತ ತಾತ್ಪರ್ಯ ನಿರ್ಣಯ ಗಳನ್ನಾಗಲೀ ಬರೆಯಲಿಲ್ಲ. ಬರೆಯಬೇಕಾದ ಅಗತ್ಯವೂ ಇರಲಿಲ್ಲ. ಆ ಕೆಲಸ ಮಾ ಡುವ ಪಂಡಿತರಿಗೆ, ವೇದವಿದರಿಗೆ, ಬುದ್ಧಿಜೀವಿಗಳಿಗೆ ಭರತ ಖಂಡದಲ್ಲಿ ಕೊರತೆಯಿರಲಿಲ್ಲ. ಜನಸಾಮಾನ್ಯರ ಕೈಗೆ ನಿಲುಕದ ಸಂಸ್ಕೃತದಲ್ಲಿ ಸೂತ್ರಾಗಮ ಭಾಷ್ಯಗಳನ್ನು ಅವರು ಬರೆದಿದ್ದರೆ ಜನಪದಕ್ಕೆ ಏನು ಪ್ರಯೋಜನವಾಗುತ್ತಿದ್ದಿತು. ಇಂದು ಆಚಾರ್ಯರ ಭಾವ ವಿಚಾರಗಳನ್ನು ನಾವು ಅರಿಯಬೇಕಾದರೆ ಅವುಗಳನ್ನು ವ್ಯಾಖ್ಯಾನಮಾಡುವ ಪಂಡಿತರ, ಅರ್ಚಕರ, ಮಠಾಧಿಕಾರಿಗಳ ಮೊರೆ ಹೋಗಬೇಕಾ ಗಿದೆ. ಪ್ರತಿಯೊಬ್ಬನೂ ಸಂಸ್ಕೃತವನ್ನು ಕಲಿತು ಅವುಗಳನ್ನು ನೇರವಾಗಿ ಅಧ್ಯವ ಸಾಯ ಮಾಡಿ ತನ್ನ ಜೀವನಕ್ಕೆ ತಂದುಕೊಳ್ಳಲಾರ. ಮಧ್ಯಸ್ಥಗಾರರಾದ ಈ ವ್ಯಾಖ್ಯಾ ನಗಾರರ ಕೈವಾಡದಿಂದ ಆಚಾರ್ಯರು ಹೇಳಿದ್ದೊಂದು; ನಾವು ತಿಳಿಯುವುದೊಂದಾಗಿ ಗುರು ಶಿಷ್ಯರಿಗೆ ತಾಳಮೇಳವಿಲ್ಲದೆ ಹೋಗುತ್ತದೆ. ಬಸವಣ್ಣನವರು ಬುದ್ಧದೇವನಂತೆ ಜನಪದದ ಭಾಷೆಯನ್ನು ಅವಲಂಬಿಸಿದರು. ಸಂಸ್ಕೃತದಲ್ಲಿ ಹೇಳಲು ಸಾಧ್ಯವಾದು ದನ್ನು ಕನ್ನಡದಲ್ಲಿಯೂ ಹೇಳಬಹುದು; ಕನ್ನಡದಲ್ಲಿ 'ಅಯ್ಯಾ' ಎಂದು ಕೂಗಿದರೆ ಶಿವ 'ಓ' ಎನ್ನದಿರಲಾರ. ಭಕ್ತನ ಭಾಷೆಯ ಕಡೆಗಲ್ಲ ಶಿವನ ಲಕ್ಷ್ಯ, ಅವನ ಹೃದಯದ ಕಡೆಗೆ ಎಂಬ ಮಹಾ ತತ್ವವನ್ನು ಪ್ರತಿಪಾದಿಸಿದರು.

ಕನ್ನಡ ಭಾಷೆ, ಸಾಹಿತ್ಯ, ಆಧ್ಯಾತ್ಮಿಕ ಜೀವನಗಳಿಗೆ ಬಸವಣ್ಣನವರಿಂದ ಆಗಿ ರುವ ಮಹೋಪಕಾರ ಅಷ್ಟಿಷ್ಟಲ್ಲ. ಕನ್ನಡ ನುಡಿಯೊಡತಿಯನ್ನು ಪರಂಪರೆಯ ಸುವರ್ಣ ಶೃಂಖಲೆಯಿಂದ ಬಿಡಿಸಿದ ಕೀರ್ತಿ ಬಸವಣ್ಣನವರದು. ಕನ್ನಡವನ್ನು

ಆಧ್ಯಾತ್ಮದ ಭಾಷೆಯ ಮಟ್ಟಕ್ಕೇರಿಸಿ ತಮ್ಮ ಅನುಭವ ಸಾಹಿತ್ಯವನ್ನು ಅದರಲ್ಲಿ ರಚಿಸಿ ಅವನ್ನು ಜಗತ್ತಿನ ಅನುಭಾವ ಭಾಷೆಗಳ ಹಂತಕ್ಕೇರಿಸಿದರು. ಅಣ್ಣನವರ ಹಿರಿಯ ಮೇಲ್ಪಂಕ್ತಿಯ ಪ್ರಭಾವದಿಂದ ಕನ್ನಡದಲ್ಲಿ ೩೦೦ ಜನಕ್ಕೂ ಮೇಲ್ಪಟ್ಟ ವಚನಕಾರರೂ ೧೫೩ಕ್ಕೆ ಮೇಲ್ಪಟ್ಟ ಕವಿಗಳೂ ಸಾಹಿತ್ಯದ ನೂತನ ಮಾರ್ಗವೊಂದನ್ನೇ ಅವಿಷ್ಕಾರ ಮಾಡಿ ಕನ್ನಡದ ಕೀರ್ತಿ ದಿಗಂತ ವ್ಯಾಪಿಸುವಂತೆ ಮಾಡಿದರು.

ಹರಿಹರ ಕವಿ ಹೇಳುವಂತೆ "ಬಸವಣ್ಣನ ಬಿಂಕದ ಭಾಷೆ ಭಾಷೆ." ಅದರ ಗಾಡಿ ಮೋಡಿ ತನ್ನದೇ ಆದ ಒಂದು ವೈಶಿಷ್ಟ್ಯದಿಂದ ಕೂಡಿದೆ. ಮಾತು ನೇರವಾಗಿ ಅವರ ಮನಮುಟ್ಟಿ ಒಲಿಸಿಕೊಳ್ಳಬೇಕು. ಭಾಷೆ ಅವರಿಗೆ ಚಿರಪರಿಚಿತವಾದ ಗಾದೆ, ನುಡಿಹಿಡಿ, ಶಬ್ದ ಸರಣಿ, ಉಪಮೆಗಳಿಂದ ಕೂಡಿರಬೇಕು. ಬಸವಣ್ಣನವರು ಕಾವ್ಯಗಳನ್ನು ಬರೆಯಲಿಲ್ಲ. ಆದರೆ ವಚನ ಮಹಾಕಾವ್ಯಗಳನ್ನು ಬರೆದ ಮೇಲೆ ಬೇರೆ ಏತಕ್ಕೆ ಬರೆಯುವ ಗೋಜಿಗೆ ಹೋಗಬೇಕು. 'ಹಾಲುಂಡು ಮೇಲುಂಬರೇ?' ಉತ್ತಮ ಕಾವ್ಯದಲ್ಲಿ ನಾವು ಅರಸುವ ಶಬ್ಧ ಮಾಧುರ್ಯ, ವಿಚಾರ ಪರಿಪ್ಲುತತೆ, ಭಾವನಾವೇಶ, ರಸಸಿದ್ಧಿಗಳೆಲ್ಲವೂ ಅಪಾರ ಪ್ರಮಾಣದಲ್ಲಿ ಬಸವಣ್ಣನವರ ವಚನಗಳಲ್ಲಿ ಮಿಡಿಯುತ್ತವೆ. ಸಾಮಾನ್ಯವಾದ ಉಪಮೆ ಕೊಟ್ಟುಕೊಂಡು, ಅದನ್ನು ಭವ್ಯಕ್ಕೆ ಒಯ್ಯುವ ಕಲಾಜಾಣ್ಮೆ ಬಸವಣ್ಣನವರಲ್ಲಿ ಆರಂಭವಾಯಿತು, ಸರ್ವಜ್ಞನಲ್ಲಿ ಕೊನೆಗೊಂಡಿತೆಂದು ಧಾರಾಳವಾಗಿ ಹೇಳಬಹುದು.

"ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟುಕೊಟ್ಟು ಸುರಕ್ಷಿತವ ಮಾಡುವ ಭವರ ನೋಡಾ."
'ಸಂಸಾರವೆಂಬುದೊಂದು ಗಾಳಿಯ ಸೊಡರು; ಸಿರಿಯೆಂಬುದೊಂದು ಸಂತೆಯ ಮಂದಿ'
ಬೀಗಿ ಬೆಳೆದ ಕೊನೆವಾಳೆಯಂತೆ ಬಾಗಿಕೊಂಡಿದ್ದರೆ ಬೇಡಿದ ಪದವಿಯನೀವ
ಕೂಡಲ ಸಂಗಮದೇವಾ'
'ಮೂಗ ಕಂಡ ಕನಸಿನಂತಾಯಿತಯ್ಯಾ'
'ಹೊಲೆಯರ ಮದ್ದಳೆಯಂತೆ ನುಡಿವ ಡಾಂಭಿಕ ನಾನಯ್ಯ.'
"ಹಡಿಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೇ?"
'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ'
'ಭಿತ್ತಿ ಇಲ್ಲದೆ ಬರೆಯಬಹುದೆ ಚಿತ್ತಾರವ'
"ಕಾಗೆ ಒಂದಗಳ ಕಂಡರೆ ಕರೆಯದೆ ತನ್ನ ಬಳಗವನು"
"ಕೋಳಿ ಒಂದು ಕುಟುಕ ಕಂಡರೆ ಕರೆಯದೆ ತನ್ನ ಕುಲವೆಲ್ಲವ"
'ಸಕ್ಕರೆಯ ಕೊಡನು ತುಂಬಿ ಹೊರಗ ಸವಿದರೆ ರುಚಿಯುಂಟೇ'
"ಆನೆಯ ಮೇಲೆ ಹೋಹನ ಶ್ವಾನ ಮುಟ್ಟಬಲ್ಲುದೇ"
'ಅಂಧಕನ ಕೈಯ್ಯಲ್ಲಿ ದರ್ಪಣವಿದ್ದು ಫಲವೇನು?'
'ವಾಯುವನಪ್ಪಿದ ಪರಿಮಳಕ್ಕೆ ನಿರ್ಮಾಲ್ಯ ಉಂಟೇ?'
"ಇಕ್ಕುಳ ಕೈ ಮುಗಿದರೇನು? ಭೃತ್ಯಾಚಾರಿಯಾಗಬಲ್ಲುದೇ?"

ಇಂತಹ ಸಾವಿರಾರು ಚಿನ್ನದಂತಹ ಮಾತುಗಳು ಬಸವಣ್ಣನವರ ವಚನಗಳ ಉದ್ದಕ್ಕೂ ಸಿಕ್ಕುತ್ತವೆ.

ಕನ್ನಡನಾಡಿನ ಪುಣ್ಯಪರಿಪಾಕದಿಂದ ಬಸವಣ್ಣನವರಂತಹ ಮಹಾ ವಿಭೂತಿಗಳು ಅವತರಿಸಿ ಜಗನ್ಮಾನ್ಯವಾಗುವಂತಹ ಧರ್ಮ, ಸಾಹಿತ್ಯ, ನೈತಿಕ ಮಾರ್ಗಗಳನ್ನು ನಿರ್ಮಾಣಮಾಡಿದರು. ತಮ್ಮ ದಿವ್ಯ ಜೀವನದಿಂದ ಜಗಜ್ಯೋತಿಗಳಾದ ಬುದ್ಧ, ಕ್ರಿಸ್ತ ಪೈಗಂಬರ್ ಮಹಮದ್, ಜಾರುತುಷ್ಟ್ರ ಇವರ ವೇದಿಕೆಯ ಮೇಲೆ ನಿಂತು, ಕನ್ನಡ ತಾಯಿಯ ಹಡೆದೊಡಲನ್ನು ಹಿಗ್ಗಿನಿಂದ ಹೆಮ್ಮೆಯಿಂದ ತುಂಬಿದರು, ದಳಿತ ಬಾಳು, ನೊಂದ ಮನಸ್ಸು, ಗುರಿಗೆಟ್ಟ ಜೀವನಗಳಿಗೆ ಹಾದಿಯನ್ನು ತೋರಿಸಿ ಪಾಪಿಗಳನ್ನು ಪುಣ್ಯವಂತರನ್ನಾಗಿ ಮಾಡಿದರು, ಅಸ್ಪೃಶ್ಯರನ್ನು ಸ್ಪೃಶ್ಯರನ್ನಾಗಿ ಮಾಡಿದರು, ಕರ್ಮ ಭ್ರಷ್ಟರನ್ನು ಕರ್ಮನಿಷ್ಟರನ್ನಾಗಿ ಮಾಡಿದರು. ಜ್ಞಾನದ ಮರುಭೂಮಿಯಲ್ಲಿ ದಾರಿಗಾಣದೆ ತೊಳಲುತ್ತಿದ್ದವರನ್ನು ಪ್ರೇಮದಿಂದ ಕರೆತಂದು ಭಕ್ತಿಯ ಮಧುವನದಲ್ಲಿ ಕೂಡಿಸಿದರು. ಭಕ್ತಿಯ ಆವೇಗದಲ್ಲಿ ವಿಚಾರಶೂನ್ಯರಾಗಿದ್ದವರಿಗೆ ಜ್ಞಾನಾಂಜನವನ್ನು ಲೇಪಿಸಿ ಅವರ ಕಣ್ಣು ತೆರೆದರು.

ಜಗದ ಎಲ್ಲ ಜೀವಿಗಳಿಗೂ "ದಯೆಯೇ ಧರ್ಮದ ಮೂಲವಯ್ಯಾ" ಎಂಬ ತಮ್ಮ ಅಮರ ಸಂದೇಶವನ್ನು ಸಾರಿದರು. ದೇಹವೇ ದೇವಾಲಯವೆಂದು, ಅದೇ ಪರಮಾತ್ಮನ ನಿಜನಿಲ್ದಾಣವೆಂದು ತಿಳುಹಿ ಪ್ರತಿ ಮಾನವನೂ ಈಶನಾಗಬಹುದೆಂಬ ಧೈರ್ಯವನಿತ್ತು, ಜಗತ್ತನ್ನು ಪಾಪದ ಹಾದಿಯಿಂದ ಹಿಂದಿರುಗಿಸಿದರು.

ಬಸವಣ್ಣನವರ ಸಮಾನರು ಯಾರು ಎಂದರೆ "ಅವರೇ" ಎಂದು ಹೇಳಬೇಕಾಗುತ್ತದೆ. ಈ ಮಾತನ್ನು ಕನ್ನಡಿಗರು ಪ್ರೇಮ ಹೆಮ್ಮೆಗಳಿಂದ ಹೇಳಲು ನಾಚುವುದಿಲ್ಲ. "ಇವರು ಯಾರವರು?" ಎಂದು ಕೇಳಿದರೆ "ನಮ್ಮವರು" ಎಂದು ಹೇಳಲು ಯಾರಾದರೂ ಮುಂದೆ ಬರುತ್ತಾರೆ. ಬಸವಣ್ಣನವರು "ನಮ್ಮವರು" ಎಂದು ಅಭಿಮಾನ ಪಡಲು ಕನ್ನಡಿಗರು ಹಿಂಜರಿಯುತ್ತಾರೆಯೇ? [ಮುಗಿಯಿತು]

# ಶಿವರಾತ್ರಿ

ಎನ್. ರಾಘವೇಂದ್ರ [ಉಪ – ಸಂಪಾದಕ]
"ವಿನೋದ" ಮಾಸಪತ್ರಿಕೆ,
ನಂ. 3, ಬಿ.ಡಿ.ಸಿ.ಸಿ. ಬ್ಯಾಂಕ್ ಕಟ್ಟಡ, ಚಾಮರಾಜಪೇಟೆ, ಬೆಂಗಳೂರು –18.

ಶಿವನ ರಾತ್ರಿ ಶಿವರಾತ್ರಿ. "ಶಿವ" ಎಂದರೆ ಮಂಗಳ ಎಂದರ್ಥ. ಮಂಗಳವಾದ ರಾತ್ರಿಯೇ ಶಿವರಾತ್ರಿ. ಈ ರಾತ್ರಿ ದೇವರನ್ನು ಭಕ್ತಿಯಿಂದ ಪೂಜಿಸಬೇಕು. ಇಲ್ಲಿ ದೇವರು ಎಂದರೆ "ವಿಷ್ಣು" ವಾಗಬಹುದು, ಕ್ರಿಸ್ತನಾಗಬಹುದು, ಇಲ್ಲವೆ "ಅಲ್ಲ" ಆಗಬಹುದು. ಅಂತೂ ಒಟ್ಟಾರೆ ದೇವರ ಸ್ಮರಣೆಯು ಮಂಗಳಕರವಾದ ರಾತ್ರಿ "ಅದು".

ವರ್ಷಕ್ಕೊಮ್ಮೆ ಬರುವ ಈ ಶಿವರಾತ್ರಿ ವಿಶಿಷ್ಟವಾದದ್ದೇ ಸರಿ. ಈ ಹಬ್ಬದ ಹಿಂದೆ ವೈಜ್ಞಾನಿಕವಾಗಿ, ಭೌಗೋಳಿಕವಾಗಿ ಗಮನಿಸಬೇಕಾದ ಅಂಶಗಳಿವೆ. ಜನವರಿ 14 ರ ಸಂಕ್ರಾಂತಿಯ ಹಬ್ಬದಿಂದ ರಾತ್ರಿ ಕಡಿಮೆಯಾಗುತ್ತಾ ಹಗಲು ಹೆಚ್ಚುತ್ತಾ ಹೋಗುತ್ತದೆ. ಈ ಹಗಲು ದೀರ್ಘವಾದ ಕಾಲದಲ್ಲೇ ಶಿವರಾತ್ರಿ ಹಬ್ಬ ಬರುತ್ತದೆ, ಈ ಶಿವರಾತ್ರಿಯಂದು ಸೂರ್ಯ ಮತ್ತು ಚಂದ್ರ ಒಂದೆಡೆ ಸೇರುವರು. ಇಲ್ಲಿ ಸೂರ್ಯನನ್ನು ಪರಮಾತ್ಮನಿಗೂ, ಚಂದ್ರನನ್ನು ಆತ್ಮನಿಗೂ ಹೋಲಿಸಿ ಆತ್ಮ ಮತ್ತು ಪರಮಾತ್ಮ ಇವೆರಡರ ಸಮ್ಮಿಲನವೇ 'ಶಿವರಾತ್ರಿ' ಎನ್ನುತ್ತಾರೆ.

'ಶಿವರಾತ್ರಿ' ಕಾಮನ ಪ್ರತಿರೂಪವೇ ಸರಿ. ಕಠಿಣವಾಗಿ ಆಚರಿಸುವ ಇಂದ್ರಿಯ ನಿಗ್ರಹದ ಈ ಹಬ್ಬ, ಮುಂಬರುವ ಕಾಮನ ಹಬ್ಬಕ್ಕೆ ನಾಂದಿ. 'ಶಿವರಾತ್ರಿ' ಯ ಹಬ್ಬಕ್ಕೆ ಹತ್ತಿರವಾದ ಹಾಗೆ, ಸುತ್ತಮುತ್ತಲಿನ ಮರಗಿಡಗಳು, ಚಿಗರಲು ಪ್ರಾರಂಭಿಸಿ, ಯುಗಾದಿಯ ಹೊತ್ತಿಗೆ ಎಲ್ಲ ಮರ ಗಿಡಗಳು ನಳನಳಿಸುತ್ತಾ, ತುಂಬು ಭಾವನೆಯಿಂದ ಕಂಗೊಳಿಸುತ್ತವೆ. ಈ ದೃಷ್ಟಿಯಿಂದ ಶಿವರಾತ್ರಿ ಯುಗಾದಿಗೂ ಸಹ ನಾಂದಿಯೇ. ಹೀಗಾಗಿ 'ಶಿವರಾತ್ರಿ' ಪ್ರಕೃತಿಯ ಲಾಸ್ಯದ ಮುಂಗೋಳಿಯೆಂದು ಹೇಳಬೇಕು.

ಮನುಷ್ಯ ತನ್ನ ಜೀವನದ ಅನೇಕ ರಾತ್ರಿಗಳನ್ನು ಬೇರೆ ಬೇರೆ ರೀತಿಯಲ್ಲಿ ಕಳೆಯುತ್ತಾನೆ. ಆದರೆ ಈ ದಿನದಲ್ಲಾದರೂ ದೇವರನ್ನು ಪೂಜಿಸಿ ಕಳೆಯಬೇಕೆಂಬುದೇ ಈ ಹಬ್ಬದ ಉದ್ದೇಶ. ಈ ಹಬ್ಬದಂದು ಉಪವಾಸದಿಂದ ಇಡೀ

ದಿನವಿದ್ದು, ಭಕ್ತಿಯಿಂದ ದೇವರಧ್ಯಾನದಲ್ಲಿ ಪೂಜಿಸಿ ಕಾಲ ಕಳೆಯಬೇಕು. ಇಲ್ಲಿ 'ಉಪವಾಸ' ಎಂಬುದು ಕೇವಲ ಹೊಟ್ಟೆಗೆ ಮಾತ್ರ ಎಂದು ಅರ್ಥವಲ್ಲ. ಮನಸ್ಸನ್ನೂ ಕೂಡ ದುರ್ವ್ಯಸನಗಳಿಂದ ದೂರವಿಡುವುದು. ಖಾಲಿ ಬಿದ್ದ ಮನಸ್ಸಿನಲ್ಲಿ ದೇವರ ಚಿಂತನೆಯನ್ನು ತುಂಬಿ ಬಿಡುವುದಕ್ಕೆ ಅನುಕೂಲವಾಗುತ್ತದೆ. 'ಉಪವಾಸ' ಎಂದರೆ ಭಗವಂತನ ಸಮೀಪವೆಂದೂ ಅರ್ಥವಿದೆ. ಆ ರಾತ್ರಿ ನಾವು ನಿಜಕ್ಕೂ ಭಗವಂತನ ಬಳಿಯೇ ಇರುತ್ತೇವೆ.

ಮನುಷ್ಯ ಆಗಾಗ್ಗೆ ಉಪವಾಸ ಮಾಡಿದರೆ, ಆರೋಗ್ಯಕ್ಕೆ ಉತ್ತಮ ಎಂಬುದು ವೈದ್ಯರ ಅಭಿಮತ. ಹೀಗಾಗಿ ದೇವರ ಹೆಸರಿನಲ್ಲಾದರೂ ಉಪವಾಸ ಮಾಡಿ ಎನ್ನುತ್ತಾರೆ. ಹಿರಿಯರು. ಯಾವ ವ್ಯಕ್ತಿ ಉಪವಾಸವನ್ನು ಆಚರಿಸುತ್ತಾನೋ ಅಂದು ಆತನಿಗೆ ಕೋಪವಾಗಲೀ, ದ್ವೇಷವಾಗಲಿ, ಕಾಮದ ವಾಸನೆಯಾಗಲೀ ಬರುವುದಿಲ್ಲ. ಆದ್ದರಿಂದ ಮಂಗಳಕರವಾದ ಆ ದಿನದಂದು ಉಪವಾಸದಿಂದ ದೇವರನ್ನು ಪೂಜಿಸಿದರೆ ಸ್ವರ್ಗ ಪ್ರಾಪ್ತಿಯಾಗುವುದು ಎಂದು ಹೇಳುತ್ತೇವೆ ನಮ್ಮ ಪುರಾಣಗಳು. ಮನುಷ್ಯ ತನ್ನ ಜೀವನದೂದ್ದಕ್ಕೂ ತನ್ನ ನೂರೆಂಟು ಜಂಜಾಟದಲ್ಲಿ ಮುಳುಗಿರುತ್ತಾನೆ. ಒಂದು ದಿನವಾದರೂ ದೇವರ ಹೆಸರಿನಲ್ಲಿ ಕಾಲ ಕಳೆಯಲಿ ಎಂಬುದೇ ಈ ಶಿವರಾತ್ರಿಯ ಉದ್ದೇಶ.

ಈಗಿನ ಅರ್ಥದಲ್ಲಿ 'ಉಪವಾಸ' ಎಂದರೆ ಸ್ಥೂಲವಾದ ಆಹಾರವನ್ನೇ ಬಿಟ್ಟು ಅಲ್ಪಾಹಾರವನ್ನು ಸ್ವೀಕರಿಸುವುದು. ಏಕೆಂದರೆ ತೃಪ್ತಿಕರವಾಗಿ ಊಟ ಮಾಡಿ ತೇಗುಗಳು ಬಂದಾಗ ನಮ್ಮ ದೇಹವು ಕೊಬ್ಬಿ ಮನಸ್ಸು ಭಗವಂತನನ್ನು ಮರೆಯುವ ಸಂಭವ ಇರುತ್ತದೆ. ಈ ದೃಷ್ಟಿಯಿಂದ ಉಪವಾಸಕ್ಕೆ ಮಿತಾಹಾರವೆಂಬ ಅನುಷ್ಠಾನ ಜಾರಿಗೆ ಬಂದಿದೆ. ಯಾವ ವ್ಯಕ್ತಿ ಯಾವಾಗಲೂ ಶರೀರಕ್ಕೆ ಅವಶ್ಯಕವಾದಷ್ಟು ಮಿತಾಹಾರವನ್ನು ಮಾಡುತ್ತಾ ಇಂದ್ರಿಯ ಚೇಷ್ಟೆಗಳೂ ಮತ್ತು ಕರ್ಮದಲ್ಲೂ ಸಹ ಸಂಯಮಿಯಾಗುತ್ತಾ ನಿದ್ರೆ ಮತ್ತು ಎಚ್ಚರ ಎರಡನ್ನೂ ಎಷ್ಟು ಬೇಕೋ ಅಷ್ಟನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾ ಬರುತ್ತಾನೋ ಅಂಥವನಿಗೆ ಪ್ರತಿ ದಿವಸವೂ ಶಿವರಾತ್ರಿ ನಿಯಮದ ಉಪವಾಸವನ್ನು ಆಚರಿಸಿದಂತಾಗುತ್ತದೆ.

ಇನ್ನು 'ಜಾಗರಣೆ' ಎಂದರೆ ಏನು? ರಾತ್ರಿ ನಿದ್ದೆಗೆಡು ಎಂದರ್ಥವೇ? ನಿದ್ದೆಗೆಡುವುದೆಂದರೆ ಜುಜಾಟ, ಇಸ್ಪೀಟಾಡಿ, ಇಲ್ಲವೇ ಸುತ್ತಾಡಿ, ಇಲ್ಲವೆ ಅಸಂಬದ್ಧ ಸಿನಿಮಾ ನೋಡಿದರೆ ಮುಗಿಯಿತೇ? ಹಾಗಲ್ಲ; ಶಿವರಾತ್ರಿಯ ದಿನ ಎಚ್ಚೆತ್ತು ದೇವರನ್ನು ಧ್ಯಾನಿಸುವುದು ಎಂದರ್ಥ. ಮತ್ತೊಂದು ಅರ್ಥದಲ್ಲಿ ಜಾಗರಣೆಗೆ ತನ್ನದೇ ಆದ ವಿಶಾಲ ಅರ್ಥವೂ ಇದೆ. ಜೀವನದ ಬಹುಪಾಲು ಮಲಗೇ ಗೊರಕೆ ಹೊಡೆದೇ ಕಳೆದು

ಹೋಗುತ್ತದೆ. ಈ ಜಡತೆ ಜಾಗೃತ ಮನುಷ್ಯನಿಗೆ ಯೋಗ್ಯವಲ್ಲ. ಎಚ್ಚರವಾಗಿರಬೇಕು, ಸದಾ ಜಾಗೃತನಾಗಿರಬೇಕು. ಯಾವಾಗ ಸುಜ್ಞಾನದ ಬೆಳಕು ನಮ್ಮಕಡೆ ಎಚ್ಚರವಾಗಿರುವಂತೆ ಮಾಡಲು ಈ ಜಾಗರಣೆಯ ವ್ರತ ಒಂದು ಸಾಧನ ಅಷ್ಟೆ.

"ಜಾಗರಣೆ" ಎಂದರೆ ಒಂದು ಬಗೆಯ ಆತ್ಮಶೋಧನೆ. ಎಂತಹ ಉನ್ನತ ಮಟ್ಟದ ಧ್ಯೇಯದ ಬೆಳಕಿನಲ್ಲಿ ನಾವು ಬಾಳುತ್ತಿದ್ದೇವೆ ಎಂದು ನಮ್ಮನ್ನು ನಾವೇ ನೋಡಿಕೊಳ್ಳುವುದೇ ಆಗಿದೆ. ನಮ್ಮ ಯೋಜನೆಗಳೂ, ಭಾವನೆಗಳೂ ನಮ್ಮ ನುಡಿ, ನಡತೆ ಇವೆಲ್ಲವೂ ಮಂಗಳಕರವಾಗಿದೆಯೋ ಇಲ್ಲವೇ ಎಂದು ಪರೀಕ್ಷಿಸಿಕೊಳ್ಳುವ ಎಚ್ಚೆತ್ತ ಅರಿವಿಗೆ ಜಾಗರಣೆ ಎಂಬುದು ನಿಜವಾದ ಅರ್ಥ.

ಆದ್ದರಿಂದ ಈ ಹಬ್ಬ ಯಾವುದೇ ಒಂದು ಜಾತಿ, ಬಣ್ಣ, ಸಂಘಕ್ಕೆ ಸೇರಿದವರಿಗೆ ಮಾತ್ರವಾಗಿಲ್ಲ. ದುರ್ದೈವೆಂದರೆ ಅಂಥ ಭಾವನೆ ಒಂದು ಸಮಾಜದಲ್ಲಿ ಕಾಣಿಸುತ್ತದೆ. ಆದರೆ ಈ ಮೇಲಿನ ಅರ್ಥವನ್ನು ಗಮನಿಸಿದಾಗ, ಈ ಶುಭ ರಾತ್ರಿ ಸಾರ್ವತ್ರಿಕವಾಗಿ ಎಲ್ಲಾ ಪಂಗಡ, ಜಾತಿ, ಧರ್ಮಗಳು ಆಚರಿಸುವಂತಹದ್ದಾಗಿದೆ. ಹೀಗಾಗಿ ಶಿವರಾತ್ರಿ ಎಲ್ಲಾ ಕಾಲಕ್ಕೂ ಆಚರಿಸುವಂತಹ ಹಬ್ಬವೆಂದೇ ಹೇಳಬೇಕು. ●

# ಇಂದು ವಿಚಾರವಾಡಬೇಕಾದ ಅಗತ್ಯವಿದೆ

ಕೆ. ಎಸ್. ರಾಜ [ನಂದಿ]
ಮನೆ ನಂ. 3-40, ದೂರವಾಣಿ ಕಛೇರಿ ಬಳಿ, ಕಲಬುರ್ಗಿ.

ವಿಚಾರ ಎಂದಾಕ್ಷಣ ಆಚಾರ ಎಂಬ ಶಬ್ದವು ನೆನಪಿಗೆ ಬರುವುದು ಖಂಡಿತ. ಈ ಹೇಸಿ ಹೇಯ ಸಮಾಜದಲ್ಲಿ ಇದ್ದು ಬಾಳಬೇಕಾಗಿದೆ. ಬದುಕಿ ಸಾಯಬೇಕಾಗಿದೆ. ಸತ್ತನಂತರ ಹೆಣ ನಾರದಂತೆ ಮನೆಯಿಂದ ದಾಟಿಸುವುದಕ್ಕಾದರೂ ಈ ಜನ್ಮದಲ್ಲಿ ಒಳ್ಳೆಯದು ಎಂಬುದು ಮಾಡಬೇಕು. ಈ ಮಾನವ ಜನ್ಮ ಪಡೆದ ಮೇಲೆ, ವಿಚಾರ ಶಕ್ತಿ ಹೊಂದಿದ ಮೇಲೆ.

ಎಲ್ಲಾ ನಮ್ಮ ಆಚಾರಗಳು, ನಮ್ಮ ವಿಚಾರಗಳ ಮೇಲೆ ಮನೆ ಮಾಡಿರುತ್ತವೆ. "ನುಡಿದಂತೆ ನಡೆ; ಈ ಜೀವನದ ಜಗವೇ ಕಡೆ" ಎಂಬ ಕವಿಯ ಕಲ್ಪನೆಯ ಮಾತು ನಮ್ಮ ಕಿವಿಗಳಿಗೆ ವಿಚಾರವಾಡದೇ ತಮ್ಮ ಮಿಂಚಿನ ಥಳಥಳಿಸುವ ಬೆಳ್ಳಿ ಬೆತ್ತದಿಂದ ಹೊಡೆಯಬಹುದು. ಒಂದು ನಿಮಿಷ ನೀವು ನುಡಿದಂತೆ ಎಷ್ಟರಮಟ್ಟಿಗೆ ನಡೆಯುತ್ತೀವೆ ಎಂಬ ಸ್ವಯಂ ಪರೀಕ್ಷೆ ಮಾಡಿಕೊಂಡರೇ ................ಕೇಳಬೇಡಿ ಅದರ ಉತ್ತರ. ಇದು ಬರಿ ಯಕ್ಷ ಪ್ರಶ್ನೆ? ನಿಜ.

ಐದು ಬೆರಳುಗಳು ಸಮವಿಲ್ಲ ನಾಲಿಗೆಗೆ ಎಲುಬಿಲ್ಲ. ಅದರಂತೆ ನಮ್ಮ ಆಚಾರ ವಿಚಾರ ಬೇರೆ ಬೇರೆ. ನೋಡಿ ಯಾವುದೇ ರೀತಿಯ ವಿಚಾರ ಮಾಡಿದರೂ ಅದಕ್ಕೆ ಕಾರಣ ಅಲ್ಲಿನ ಪರಿಸರ. ಮಾನವ ಸಮಾಜ ಜೀವಿಯಾಗಿದ್ದಾನೆ; ಬುದ್ಧಿಜೀವಿಯಾಗಿದ್ದಾನೆ ಆತನಿಗೇ ಧರ್ಮದ, ಜಾತಿಯ ಕಡೆಗೀಲುಗಳು ಬೇಕೇ; ಬೇಕು. ಮಾನವನಾಗಿ ಬಾಳಬೇಕಾದರೆ, ಅವನಿಗಿರಲಿ ಅನುಕಂಪ.

ಶಿವಶರಣರು ನುಡಿದಂತೆ "ಅರಿದೊಡೆ ಶರಣ, ಮರೆತೊಡೆ ಮಾನವ" ಎಂಬ ಉಕ್ತಿಯಲ್ಲಿ ಸತ್ವವಿದೆ. ಸಾಧನವಾಗಲಿ, ಶ್ರಮದ ಫಲವಾಗಲಿ: ಜ್ಞಾನದ ತೃಷೆಯಾಗಲಿ, ಹಿಂಗಲು, ಆತ್ಮಶಾಂತಿ ಪಡೆಯಲು, ಜ್ಞಾನಾಮೃತ ಸವಿಯಲು, ನಮ್ರತೆಯಿಂದ ಗುರುವಿನ, ಹಿರಿಯರ ಗುಲಾಮನಾಗಲೇಬೇಕು.

ಒಂದು ತತ್ವದ ಪದದಲ್ಲಿ ಹೇಳಿದಂತೆ,

"ನಾಲ್ಕು ದಿನದ ಸಂತಿ
ನೀ ಯಾಕ ಮಾಡತಿ ಚಿಂತಿ
ನಾಲ್ಕು ಮಂದಿ ಹೆಗಲಮ್ಯಾಲ ನೀ ಹೊರಟಿ"

ಹೌದು ನಾವು ಇಂದಿಲ್ಲ ನಾಳೆ; ಈ ಜಾಗ ಖಾಲಿ ಮಾಡಲೇಬೇಕು. ವಿಧಿಯ ನಿಯಮ ಪಾಲಿಸಲೇಬೇಕು. ಪ್ರಕೃತಿಯ ಮಹಾನ್ ಪುರುಷ ನಮಗೆ ಏನೆಲ್ಲವನ್ನು ಕೊಟ್ಟ ..... ಆದರೆ ಅವುಗಳನ್ನು ಪಡೆದುಕೊಂಡು ನಾವು ಮಾಡುತ್ತಿರುವುದೇನು :... ಆತ್ಮ ಆ ಮಹಾನ್ ಪರಮಾತ್ಮನಲ್ಲಿ ಲೀನವಾಗಬೇಕು, ಆನಂದ ಪರಮಾನಂದದಲ್ಲಿ ಬೆರೆತು ಸಚ್ಚಿದಾನಂದದಲ್ಲಿ ಸೇರಲೇಬೇಕು. ಆಗ ಸಿಗುವ ತೃಪ್ತಿ ಅಷ್ಟಿಷ್ಟಲ್ಲ ಬದುಕಿನಲ್ಲ ಸಾಂತ್ವನ ಪಡೆಯುವುದಕ್ಕೆ ವಿಚಾರ. ಆಚಾರ ಬೇಕೇಬೇಕು ಈ ಜಗತ್ತಿನಲ್ಲಿ ಬದುಕಿದ್ದೇವೆ ಆಸೆಯಿಂದ, ಬಯಕೆಯಿಂದ, ಛಲದಿಂದ ಮೇಲೆ ಆ ಪರಮಾತ್ಮನ ಕೃಪಾಕರುಣಾ ಕಟಾಕ್ಷದಿಂದ. ಈ ಜಗತ್ತಿನಲ್ಲಿ ನಾವು ಬದುಕುತ್ತಿದ್ದೇವೆ ನಿಜ ಆದರೆ ನಮ್ಮ ಜೀವನವನ್ನು ಸುಗಮವಾಗಿ ಸಾಗಿಸುತ್ತಿದ್ದೇವೋ; ನೂಕುತ್ತಿದ್ದೇವೋ ಅದು ತಿಳಿಯದು. ಈ ಜಗತ್ತಿನ ನಾನಾ ವಿಧದ ಜಂಜಡಕ್ಕೆ ಸಿಲುಕಿ ನಾವು ನಮ್ಮತನವನ್ನು ಮರೆಯುತ್ತಿದ್ದೇವೆ; ಮರೆತಿದ್ದೇವೆ ಎಂದರೇನು ಅತಿಶಯೋಕ್ತಿಯಿಲ್ಲ.

ಸಮಾಜದ ಕಟ್ಟಳೆಗೆ, ಸಂಪ್ರದಾಯಗಳಿಗೆ, ಲೋಕರೂಢಿಗಳಿಗೆ, ವಾಡಿಕೆಗಳಿಗೆ ನಾವು ಬದ್ಧರಾಗಲೇಬೇಕು ಈ ಸಮಾಜದಲ್ಲಿದ್ದಾಗ. ಶಿವಶರಣರು ಈ ಸಮಾಜದಲ್ಲಿ ನಮ್ಮಂತೆ ಹುಟ್ಟಿ ಬೆಳೆದು, ಜ್ಞಾನವನ್ನು ಪಡೆದು ಭೂಕೈಲಾಸವನ್ನು ಮಾಡಿದವರು, ಸಮಾಜ ಸುಧಾರಣೆಗಾಗಿ ದುಡಿದವರು. ಅವರ ಧರ್ಮ, ಮಾನವ ಧರ್ಮ. ತೊಟ್ಟಿಲಿನಿಂದ ಕಣಿಯವರೆಗೂ ಈ ಜಗದ ಕಾರ್ಯಕಲಾಪದಲ್ಲಿ ಸಿಗಿವಿದ್ದು; ಆದರಲ್ಲಿಯೇ ಆನಂದ ಕಾಣುತ್ತಿದ್ದೇವೆ. ನಿಜವಾದ ಧರ್ಮ ಯಾವುದು? ಬರೀ ದೇವರ ಪೂಜೆಯಲ್ಲಿಯೇ ಕಾಲಕಳೆಯುವುದೇ....? ಇಲ್ಲ, ನಿಜವಾದ ಪೂಜೆ ಬಡಜನರ ಸೇವೆ, ದಲಿತೋದ್ಧಾರ. ಬರಿ ಕತ್ತಲೆಯ ಕೋಣೆಯಲ್ಲಿ ಕುಳಿತು ದೇವರ ಧ್ಯಾನಿಸಿದರೇ ಆ ದೇವರು ಸಿಗನು. ಹೋಗಿನೋಡಿ ಕಲ್ಲು ಒಡೆಯುವ ಕಾರ್ಮಿಕರಲ್ಲಿ, ಭೂಮಿ ಉಳುವ ರೈತನಲ್ಲಿ ದೇವರಿದ್ದಾನೆಂದು ಕವೀಂದ್ರ, ರವೀಂದ್ರರ ಮಾತು ತ್ರಿಕಾಲ ಸತ್ಯ. ನಮ್ಮ ಶಿವಶರಣರು ಮಾಡಿದ್ದು ಅದೇ. ಜ್ಞಾನಿ, ಅಜ್ಞಾನಿ, ಸಜಾತಿ, ವಿಜಾತಿ, ಜಾತಿ, ಮೇಲು, ಕೀಳು, ಬಡವ, ಬಲ್ಲಿದ, ಎಂದು ಯಾರಿಗೂ ವಕ್ರ ದೃಷ್ಟಿಯಿಂದ ನೋಡದೇ "ಇವ ನಮ್ಮವ, ಇವ ನಮ್ಮವ" ಎಂದವರು ಭಕ್ತಿಭಂಡಾರಿ, ಬಸವಣ್ಣನವರು.

ಇಂಥ ಎಲ್ಲ ಇತಿಹಾಸದಿಂದ ಮುಂದುವರೆದ ನಾವು ಇಂದು ಈ ಸಮಾಜಕ್ಕಾಗಿ ಏನು ಮಾಡುತ್ತಿದ್ದೇವೆ ಎಂದರೇ ನಮ್ಮ ತಲೆಗೆ ಮಂಕು ಕವಿದಂತಾಗುವುದು. ಇಂದು ಮಾನವರ ಉದ್ಧಾರಕ್ಕಾಗಿ, ಸಮಾಜ ಸೇವೆಗಾಗಿ, ಮಾನವತಾವಾದವನ್ನು ಸಾರುವುದಕ್ಕಾಗಿ ಮತ್ತು ಅನೇಕ ತರಹದಿಂದ ಹಲವಾರು ಮಠಗಳು, ಮಠಾಧಿಕಾರಿಗಳು ಮುನ್ನುಗ್ಗಿ ಬರುತ್ತಿದ್ದಾರೆ.

ಈ ಕಲಿಗಾಲದಲ್ಲಿ ಮಾನವನ ಬುದ್ಧಿ ಲೋಪವಾಗಿದೆ. ಭಗವಂತನ ಸಾಕ್ಷಾತ್ಕಾರ ಸೊನ್ನೆಗೆ ಇಳಿದಿದೆ. ಕ್ಷಣ ಕ್ಷಣಕ್ಕೆ ಸಮಾಜ ಘಾತುಕರು ಸಮಾಜದಿಂದ ಲಾಭ ಗಿಟ್ಟಿಸಲು ಪ್ರಯತ್ನ ಪಡುತ್ತಾರೆ ವಿನಹ ಸಮಾಜದ ಏಳಿಗೆಗೆ ದುಡಿಯುವುದಿಲ್ಲ

ಇಂಥ ಪರಿಸ್ಥಿತಿಯಲ್ಲಿ ಸಿಲುಕಿದಾಗ ಚಂಚಲ ಮನಸ್ಸಿನ ಮಾನವನಿಗೆ ಯಾವ ಕಡೆಗೆ ಸೇರಬೇಕು ಎಂಬುದು ಗೊತ್ತಾಗದೇ ಅಗಸರ ನಾಯಿ.ಯಾಗಿ ಅಲೆದಾಡುತ್ತ ತನ್ನ ಜೀವನ ವ್ಯರ್ಥವಾಗಿಸಿಕೊಳ್ಳುತ್ತಾನೆ. ಜೀವನದಲ್ಲಿ ಅಸಂಗತವೇ ಬರಲು, ನಿರಾಸಕ್ತನಾಗಲು ಇವೇ ಕಾರಣಗಳಾಗಿ ನಿಲ್ಲುತ್ತವೆ

ಯಾಂತ್ರಿಕಕಲೆಯ ಯುಗದಲ್ಲಿ ಸಿಕ್ಕ ಈ ಪ್ರಾಣಿಗೆ ಮನ ತೃಪ್ತಿಯೇ ಇಲ್ಲ. ಹೊಟ್ಟೆ ಹೊರೆಯುವುದೇ ದೊಡ್ಡ ಕೆಲಸವಾಗುತ್ತದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಆತ ಸೂತ್ರದ ಬೊಂಬೆ. ಜಗತ್ತಿನ ನಿಯಮದ ಜೊತೆಗೆ ತನ್ನ ಜೋಟು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಹಗಲಿರುಳು ದುಡಿಯುತ್ತಾನೆ.

ಮಾನವ ಬರೀ ಶ್ರಮಜೀವಿ ಆದರೆ ಆತನಿಗೆ ಆನಂದ ದೊರೆಯಬೇಕು. ಹಿಂದೆ ಬಸವಾದಿ ಪ್ರಮಥರು ಹಿಡಿದ ದಾರಿ. ಮೋಳಿಗೆಯ ಮಾರಯ್ಯ, ಕಲಕೇತ ಬೊಮ್ಮಯ್ಯ, ಕಿನ್ನರಯ್ಯ ಇತರರು ಕಾಯಕದ ಫಲದಿಂದ ದಾಸೋಹವನ್ನು ಮಾಡಿ, ಜೀವನ ಮುಕ್ತಿಯನ್ನು ಪಡೆದವರು. ಆ ಶರಣರಂತೆ, ಅವರು ನುಡಿದ ವಚನಗಳಂತೆ, ಹಾಕಿಕೊಟ್ಟ ದಾರಿಯಲ್ಲಿ ನಡೆಯಲು ಪ್ರಯತ್ನಿಸುವುದು ಪ್ರತಿಯೊಬ್ಬ ಮಾನವನ ಆದ್ಯ ಕರ್ತವ್ಯವಾಗಿದೆ.

ವಿಚಾರವಾದ ನಮ್ಮಲ್ಲಿ ಬಲವಾಗಿ ಬೆಳೆಯಬೇಕು. ನಮಗಾಗಿ ನಮ್ಮ ಮುಂದಿದ ಪೀಳಿಗೆಗಾಗಿ ಬಾಳಿನ ಪುಟಗಳನ್ನು ಶುಚಿಯಾಗಿ, ಸ್ವಾರಸ್ಯಕರವಾಗಿ, ಇರಿಸಲು ಪ್ರತಿಯೊಬ್ಬನೂ ಪ್ರಯತ್ನಿಸಬೇಕು. ವಿಚಾರ ಮಾಡಲೇಬೇಕು. ಈ ವಿಚಾರದಿಂದ, ಅತೃಪ್ತಿಯಿಂದ ಬಾಯಿ ತೆರೆದುಕೊಂಡು ನಿಂತ ನಮ್ಮ ಆಹ್ವಾನಗಳನ್ನು ಎದುರಿಸಲು ವಿಚಾರ .... ವಿಚಾರ .... ವಿಚಾರ ಅಗತ್ಯ. ●

# ಮನಶ್ಶುದ್ಧಿಯೇ ಮಹಾಧರ್ಮ

—ನ. ಮುನಿಸ್ವಾಮಿ

ಶಾಂತಿ ನಿಲಯ, ನಂ. 622, 3ನೇ ಮುಖ್ಯಬೀದಿ ಕೆಂಗೇರಿ ಉಪನಗರ
ಬೆಂಗಳೂರು—560060

ತಮಿಳು : ಮನತ್ತುಕ್ಕಣ್ ಮಾಸಿಲನ್ ಆದಲ್ ಅನೈತ್ತು ಅರನ
ಆಗುಲ ನೀರ ಪಿರ

ಕನ್ನಡ : ಮನದೊಳ್ ಮಾಸಿಲ್ಲದಿಪುದಿನಿತೇ ಧರ್ಮಂ
ಡಂಬಾಚಾರಂಗಳ್ ಮಿಕ್ಕವೆಲ್ಲಂ

ಇದು ತಮಿಳು ಸಾಹಿತ್ಯದ ಮೇರು ಕೃತಿ ಎನಿಸಿದ 'ತಿರುಕ್ಕುರಳ್' ಎಂಬ ಕೃತಿಯ ಧರ್ಮಭಾಗದಲ್ಲಿ 'ಧರ್ಮ ನಿರೂಪಣಾಧ್ಯಾಯದಲ್ಲಿ' ಉಲ್ಲೇಖಿಸಲ್ಪಟ್ಟಿರುವ ಒಂದು ಶ್ಲೋಕ. 'ಮನಸ್ಸಿನಲ್ಲಿ ಮಾಲಿನ್ಯ ನಿಲ್ಲದಿರುವುದಷ್ಟೇ ಧರ್ಮ ಎನ್ನಲ್ಪಡುವುದು; ಉಳಿದ ಬಹಿರಂಗಿಕವೇಷ ಭೂಷಣಗಳೆಲ್ಲಾ ಡಾಂಭಿಕತೆಯನ್ನು ಪ್ರದರ್ಶಿಸುವ ಧರ್ಮ ವಿಲಕ್ಷಣ ಪ್ರವೃತ್ತಿಗಳೇ ವಿನಹ ಬೇರೆನು ಅಲ್ಲ' ಎನ್ನುವುದು ಈ ಶ್ಲೋಕದ ಸಾರಾಂಶ. ಮನಸ್ಸಿನ ಮಾಲಿನ್ಯ ಎನ್ನುವುದಕ್ಕೆ ತಿರುವಳ್ಳುವರು ಕೊಟ್ಟಿರುವ ವಿವರಣೆ ಆಸೆ, ಅಸೂಯೆ, ಆಕ್ರೋಶ ಮತ್ತು ಅಹಿತೋಕ್ತಿ. ಮನಸ್ಸಿನ ಮಾಲಿನ್ಯ ಎಂಬ ನುಡಿಗಟ್ಟಿನ ಒಳ ಅರ್ಥವನ್ನು ಬಿಡಿಸಿ ಹೇಳಬೇಕೆಂದರೆ, ಅದು ಸ್ವಾರ್ಥವಲ್ಲದೆ ಮತ್ತೇನು ಅಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳ ಮೊತ್ತ ಸ್ವರೂಪವೇ ಸ್ವಾರ್ಥ. ಇದು ಮಾನವೀಯತೆಯನ್ನು ಮಾರಣ ಮಾಡುವ ಮಹಾ ದುಷ್ಟ ಪ್ರವೃತ್ತಿ. ಶಿಷ್ಟ ಗುಣಗಳ ಮೊತ್ತ ಸ್ವರೂಪವಾದ ಅತಿಮಾನುಷ ಶಕ್ತಿಯನ್ನು ಸತ್, ಶಿವ, ಯೊಹೋವ, ಗಾಡ್, ಬುದ್ಧ, ಅರ್ಹಂತ ಮತ್ತು ಅಲ್ಲಾ ಎಂಬ ವಿಭಿನ್ನ ಕಲ್ಪಿತ ನಾಮಗಳಿಂದ ಜಗತ್ತು ಕರೆದಂತೆ, ದುಷ್ಟಗುಣ ಮೊತ್ತ ಸ್ವರೂಪವಾದ ಅತಿಮಾನುಷ ಶಕ್ತಿಯನ್ನು ಅಸತ್ ಎಂದು ತಮಸ್ ಎಂದು ದ್ರಷ್ಟಾರರು ಕರೆದರು. ಇದನ್ನೇ ವೈದಿಕರು ಅರಿಷಡ್ವರ್ಗವೆಂದು, ಶೈವರು ತ್ರಿಮಲವೆಂದು, ಬೌದ್ಧರು ಮಾರನೆಂದು, ಕ್ರೈಸ್ತರು (ಯಹೋದಿಯರು) ಸೇಟನ್ ಅಥವ ಡೆವಿಲ್ ಎಂದು ಇಸ್ಲಾಮಿಯರು ಇಬುಲಿಸು ಎಂದು, ಪಾರಸಿಗಳು ಅಹಿರಾಮನ್ ಎಂದು ಕರೆಯುತ್ತಾರೆ. ದೆವ್ವ, ಪಿಶಾಚಿ' ದೈತ್ಯ, ದಾನವ, ರಾಕ್ಷಸ, ಅಸುರ ಎಂದು ದೃಷ್ಟಾಂತ, ಕಥೆ ಪುರಾಣ

ಮತ್ತು ಕಾವ್ಯಗಳಲ್ಲಿ ರೂಪಕಗಳ ಮೂಲಕ ವರ್ಣಿಸಲ್ಪಟ್ಟಿರುವ ಪ್ರತಿಮಾ ವಿನ್ಯಾಸಗಳೆಲ್ಲಾ ಈ ಅಸತ್ ಶಕ್ತಿಯ ಪ್ರತೀಕವಾಗಿ ಮಾನವರ ಮನಗಳಲ್ಲಿ ಹುದುಗಿರುವ ಅಹಂಕಾರ, ಮಮಕಾರ, ಮಮತೆ, ವ್ಯಾಮೋಹ, ದುರಾಶೆ, ಮತ್ಸರ, ಮುನಿಸು ಮೊದಲಾದ ದುಷ್ಟಗುಣಗಳ ಸಮೂಹವೇ ಹೊರತು ಬೇರಲ್ಲ.

ಜಗತ್ತಿನ ಸರ್ವ ಸುಖಭೋಗಗಳನ್ನು ತಾನೊಬ್ಬನೇ ಅನುಭವಿಸಬೇಕೆಂಬ ಸ್ವಾರ್ಥಬುದ್ಧಿ-ಅಥವ ದುರಾಶೆಯ ಬೀಜ ಮಾನವನ ಮನೋಭೂಮಿಕೆಯಲ್ಲಿ ಬಿತ್ತಲ್ಪಡುತ್ತದೆ. ತನಗೆ ಲಭಿಸದ ಆ ಸುಖಭೋಗಗಳು ಬೇರೊಬ್ಬನಿಗೆ ಲಭಿಸಿದಾಗ ಅದನ್ನು ಕಂಡು ಅಂತರಂಗದಲ್ಲಿ ಅಸಹನೀಯ ಪ್ರವೃತ್ತಿ ಅಂಕುರವಾಗುತ್ತದೆ. ಅದೇ ಅಸೂಯೆ ಅಥವ ಹೊಟ್ಟೆಯಕಿಚ್ಚು. ಈ ಅಸೂಯೆ ಅಣ್ವಸ್ತ್ರದಂತೆ ಆಸ್ಫೋಟನೆಯಾದಾಗ ಹೊರಹೊಮ್ಮುವುದೇ ಕ್ರೋಧ ಮತ್ತು ಕರ್ಣ ಕಠೋರ ವಾಕ್ಯ. ಶಿಲಾಯುಗದಿಂದ ಈ ಅಣುಯುಗದವರೆಗೆ ವಿಶ್ವ ಇತಿಹಾಸದಲ್ಲಿ ಸಂಭವಿಸಿರುವ ಸುಲಿಗೆ, ಗುಂಪು ಘರ್ಷಣೆ ಸಾಮಾನ್ಯರ ಶೋಷಣೆ, ಸಾಮೂಹಿಕ ಕಗ್ಗೊಲೆ. ಅತ್ಯಾಚಾರ, ಅತಿಕ್ರಮಣ ಮೊದಲಾದ ಎಲ್ಲ ದುಷ್ಕೃತ್ಯಗಳಿಗು ಮೂಲ ಕಾರಣವಾಗಿರವುದು ಮಾನವರ ಮನಸ್ಸಿನಲ್ಲಿ ಅಂಟಿಕೊಂಡಿರುವ ಈ ಸ್ವಾರ್ಥ ಬುದ್ಧಿಯ ಮಾಲಿನ್ಯವೇ. ಸತ್ವಹೀನ ವಸ್ತುವೇ ಮಲ ಅಥವ ಮಾಲಿನ ಎಂದು ಕರೆಯಲ್ಪಡುತ್ತದೆ. ಶರೀರದಲ್ಲಿ ಈ ಸತ್ವಹೀನ ವಸ್ತು ಮಲ ಮೂತ್ರ, ಬೆವರು ಮತ್ತು ದುರ್ಗಂಧಗಳ ರೂಪದಲ್ಲಿ ಕ್ರಮ ಬದ್ಧವಾಗಿ ವಿಸರ್ಜಿಸಲ್ಪಡದೆ ಮಾನವನ ಮೈಯ್ಯಲ್ಲಿಯೇ ಅಂಟಿಕೊಂಡಿದ್ದರೆ, ಅದೇ ಸಕಲ ವಿಧ ರೋಗಗಳಿಗೆ ಕಾರಣವಾಗುತ್ತದೆ. ಇದು ಪ್ರಕೃತಿ ಚಿಕಿತ್ಸೆಯ ಮೂಲಭೂತ ತತ್ವ. ಆ ಸತ್ವಹೀನ ವಸ್ತುವಿನಂತೆಯೇ ಅತಿಯಾಸೆ, ಮಾತ್ಸರ್ಯ, ಕ್ರೋಧ ಮತ್ತು ಅವಾಚ್ಯಗಳೆಂಬ ಮಲಿನಗಳು ಮಾನವನ ಮನಸ್ಸಿನಲ್ಲಿ ಅಂಟಿಕೊಂಡಿರುತ್ತವೆ ಅವುಗಳೇ ಸಕಲ ವಿಧ ಪಾಪ ಕೃತ್ಯಗಳಿಗೂ ಕಾರಣವಾಗುತ್ತದೆ. ರೋಗ ಮತ್ತು ಪಾಪಗಳ ಫಲ ಅಘೋರ ನರಕ.

'ಮಲ, ಅಥವ, 'ಮಾಲಿನ್ಯ, ವಿಲ್ಲದ ಪರಿಶುದ್ಧ ಹೃದಯವನ್ನು ,ಹೃದಯ ಕಮಲ, ಎಂದು ನಮ್ಮ ಪೂರ್ವಿಕರು ಕರೆದರು. ಅಲ್ಲದೆ ಅದರಲ್ಲಿ ವಾಸಿಸುವ ದೈವವನ್ನು ,ವಿಮಲ, ಎಂದೇ ಸ್ತುತಿಸಿದರು. ಬುದ್ಧ, ಅರ್ಹಂತ ಮತ್ತು ಹಿಂದು ದೇವ ದೇವಿಯರು ಕಮಲದ ಹೂವಿನ ಮೇಲೆ ಕುಳಿತಿರುವಂತೆಯೋ ಅಥವ ನಿಂತಿರುವಂತೆಯೋ ಚಿತ್ರಕಲೆಗಾರರು ಬರೆಯುವ ಚಿತ್ರದ ಅಂತರಾರ್ಥ ಇದೇ. ಕಮಲದ ಹೂವು ಶುದ್ಧ ಹೃದಯದ ಪ್ರತೀಕ ಕಮಲದ ಕೆಳಗಿನ ಕೆಸರು ಅಥವ ಮಲ ಅಶುದ್ಧ ಹೃದಯದ ಪ್ರತೀಕ. ಹೃದಯವನ್ನು ಮಲವನ್ನಾಗಿಯೋ ಅಥವ ಕಮಲವನ್ನಾಗಿಯೋ ಮಾಡಿಕೊಳ್ಳುವುದು ಅವರವರ ಮನಸ್ಸಿನ ಚಿಂತನೆಗೆ ಸಂಬಂಧಪಟ್ಟ ವಿಷಯ. ಹೃದಯ ಶುದ್ಧಿಗಾಗಿಯೇ ಧರ್ಮ, ಧರ್ಮಸಂಸ್ಥೆಗಳು, ಧರ್ಮ ಲಾಂಛನಗಳು ದೇವಾಲಯ,

# ಗ್ರಂಥಗಳ ಓದಿನ ಉಪಯೋಗ

—ಬಿ. ಎಸ್. ಕೃಷ್ಣಮೂರ್ತಿ
ನಂ. 5, ಸೀತಾವಿಲಾಸ ರಸ್ತೆ, ಮೈಸೂರು – 570001.

"ಗ್ರಂಥಗಳ ಓದಿನ ಉಪಯೋಗ ಎಂದರೇನು; ಅದನ್ನೇಕೆ ಓದಬೇಕು?" "ನಿಜ, ಸಹಜವಾಗಿ ಏಳುವ ಪ್ರಶ್ನೆಯೇ ಇದು! ಈ ವಿಷಯಕ್ಕೆ ಸಮಂಜಸವಾದ ಉತ್ತರವನ್ನು ಕಂಡುಕೊಳ್ಳಬೇಕು." ಆಗಲೇ ಮನಸ್ಸಿಗೆ ತೃಪ್ತಿ, ನೆಮ್ಮದಿಯೂ ಕೂಡ. ಕೆಲವರ ತರ್ಕ ಏನೆಂದರೆ, —

"ಸಾಮಾನ್ಯ ಓದು ನಡೆಸಿ ಒಂದು ಸಣ್ಣ ಪರೀಕ್ಷೆ ಮುಗಿಸಿದರೆ ಸಾಲದೆ? ಸುಮ್ಮನೆ ಓದುತ್ತಾ ಹೋದರ ಅದಕ್ಕೆ ಕೊನೆಯೆಲ್ಲಿ? ಸಂಪಾದನೆಯ ಮಾರ್ಗವನ್ನು ಯೋಚಿಸಿ ಬೇಡವೇ? ಜೀವನದ ಕ್ರಮಕ್ಕೆ ದಾರಿಯಾವುದು? ಹಸಿವಿನ ಕೂಗಿಗೆ ಉತ್ತರ ಕೊಡು ವುದೇನು?

ಇನ್ನು ಕೆಲವರ ವಾದವೆಂದರೆ, —

"ಪರೀಕ್ಷೆಯೂ ಬೇಡ, ಏನೂ ಬೇಡ. ಸುಮಾರು ಅಕ್ಷರಜ್ಞಾನ ಇದ್ದರೆ ಸಾಕು. ನಿತ್ಯ ವ್ಯವಹಾರ ಜ್ಞಾನ ಇದ್ದರೆ ಬೇಕಾದಷ್ಟಾಯಿತು. ಬೇಕಾದರೆ ವಾರ್ತಾ ಪತ್ರಿಕೆ ಯನ್ನೋ ಇನ್ನೂ ಬೇಸರವಾದರೆ ಕಥೆ ಪುಸ್ತಕಗಳನ್ನೋ ಓದಿದರೆ ಮನರಂಜನೆ ಆಗು ತ್ತದೆ. ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು?

ಈ ತೆರನಾದ ಅಭಿಪ್ರಾಯಗಳು ಸ್ವಂತ ಭೂಮಿ ಕಾಣಿ ಇರುವವರೂ, ಆರಂಭ, ವ್ಯವಸಾಯಗಳ ಗುರಿ ಇರುವವರೂ ಅನ್ನುವ ಮಾತಾಯಿತು. ಆದರೆ ಮಿಕ್ಕವರ ಪಾಡೇನು, ಜೀವನ ಸಮಸ್ಯೆ ಹೇಗೆ ಪರಿಹಾರ ಕಂಡೀತು?

ಕಾಲ ಬದಲಾವಣೆಯಾಗಿದೆ, ಮುಂಬರುವ ದಿನಗಳು ಇನ್ನೂ ಕಠಿಣವಾಗ ಬಹುದೆಂಬುದನ್ನು ದಿನವಹಿ ನಡೆಯುತ್ತಿರುವ ರಾಜಕೀಯ ತಳಮಳಗಳಿಂದ ಊಹಿಸಿ ಕೊಳ್ಳಬಹುದು.

ಆದ್ದರಿಂದ ಹಿಂದಿನ ಕಾಲದ ಜನರ ಅಭಿಪ್ರಾಯಗಳು ಈಗಿನ ಕಾಲಕ್ಕೆ ಸರಿ ಹೊಂದುವುದಿಲ್ಲ. ಈಗಿನ ಜೀವನ ದುಸ್ಸಹವಾದದ್ದು. ಗಂಡಾಂತರಗಳಿಂದ ಕೂಡಿ ದ್ದಾಗಿದೆ. ಇದರ ಪರಿಹಾರವೇನು?

ಜೀವನಕ್ರಮಕ್ಕೆ ಈಗ ಹೆಚ್ಚಿನ ಆಧುನಿಕ ವಿದ್ಯಾಪರಿಣತಿ ಬೇಕು. ಹೆಚ್ಚು ಓದಿ ಹೆಚ್ಚು ಜ್ಞಾನವಂತರಾಗಬೇಕು, ಇಂಥವರಿಗೆ ಲೋಕದಲ್ಲಿ ಎಲ್ಲೆಲ್ಲಿಯೂ ಬೆಲೆ ಇದೆ. ಆದುದರಿಂದ ಗ್ರಂಥಗಳ ಅಧ್ಯಯನ ಸರ್ವತೋಮುಖವಾಗಿ ನಡೆದು ಜ್ಞಾನ ಭಂಡಾರ ವಿಸ್ತಾರವಾಗಬೇಕಾಗಿದೆ. "More pains, More gains" ಎಂದು ಅನ್ನುವುದಿಲ್ಲವೇ?

ಅಧಿಕ ಓದಿನಿಂದ ಜ್ಞಾನವು ಹೆಚ್ಚಿ ಬುದ್ಧಿ ಬಲ ಅಧಿಕವಾಗುತ್ತದೆ. ವಿಶ್ವ ಪ್ರಯತ್ನದಿಂದಲೂ, ಶ್ರಮದಿಂದಲೂ ಬಹುಮುಖ ಪ್ರತಿಭೆಯನ್ನು ಗಳಿಸಬೇಕು. ಇದರಿಂದ ಏಳಿಗೆಯು ಆಗಿಯೇ ಆಗುತ್ತದೆ. ಜೀವನ ಸೌಖ್ಯದ ಮಾರ್ಗವೇರ್ಪಡುವುದು.

ಗ್ರಂಥಗಳ ಓದು ಮನುಷ್ಯನನ್ನು ಪಂಡಿತನನ್ನಾಗಿ ಮಾಡುವುದು. ಆಗ ಗೌರವ ಪದವಿಗಳು ಹಿಂದಟ್ಟಿ ಬರುತ್ತವೆ. ಉತ್ತಮ ಓದಿನ ಕ್ರಮದಿಂದ ಜೀವನದ ಅಚ್ಚುಕಟ್ಟುತನ ಬಂದು ಓದಿನ ಜ್ಞಾನಕ್ಕೆ ಮೆರಗು ಬರುತ್ತದೆ.

ಜ್ಞಾನಲಾಭಕ್ಕೆ ಒಂದೇ ಒಂದಾದ ರಾಜಮಾರ್ಗವಿಲ್ಲ! ಹಲವು ಅಡ್ಡ ಮಾರ್ಗಗಳೂ ಉಂಟು. ಈ ಎರಡು ಮಾರ್ಗಗಳಿಂದಲೂ ಜ್ಞಾನ ಹೊಂದುವ ಯತ್ನ ಸಾಗಬೇಕು. ಅಧಿಕ ಶ್ರಮದಿಂದ ಆರ್ಜಿಸಿದ ವಿದ್ಯೆಗೆ ತುಂಬ ಹಣ ಸಂಪಾದನೆ ಆಗುವುದು, ಯಾವಾಗಲೂ ನಿಜ! ಸಂಪಾದನೆ ದೃಷ್ಟಿಯಿಂದಾದರೂ ಹೆಚ್ಚು ಜ್ಞಾನ ಪಡೆಯಲು ಸಂಕಲ್ಪಿಸಬೇಕು. ಸುಜ್ಞಾನದಿಂದ ಸುಖವೇ ಹೊರತು ಕಷ್ಟವಿರದು.

ಉತ್ತಮ ಗ್ರಂಥಗಳ ಅನ್ವೇಷಣವು ಸುಲಭವಲ್ಲ. ಅವುಗಳನ್ನು ಆರಿಸಲು ಜಾಣತನ, ದೂರದೃಷ್ಟಿ, ತಿಳುವಳಿಕೆಗಳೂ ಅಗತ್ಯ. ಜ್ಞಾನಲಾಭದ ಆಶೆ, ಆಕಾಂಕ್ಷೆಗಳಿರುವವರು ಬಿಗಿಕ್ರಮದಿಂದ ತಮ್ಮ ಗುರಿಯನ್ನು ಸಾಧಿಸಬಲ್ಲರು. ಜ್ಞಾನವು ಸುಮ್ಮನೆ ಬರುವುದಿಲ್ಲ. ಇದಕ್ಕೆ ನಿಷ್ಠೆ, ಗುರಿತಪ್ಪದ ಅಧ್ಯಯನ, ಹೆಚ್ಚು ಹೆಚ್ಚು ತಿಳಿಯುವ ಕುತೂಹಲ ಕೆರಳಬೇಕು ಇದೊಂದು ಕಠಿಣ ತಪಸ್ಸೇ ಅನ್ನಬಹುದು. ಆದ್ದರಿಂದ ಇದಕ್ಕೆ ಸಾಧನೆಯು ಅತ್ಯವಶ್ಯಕ.

ಸ್ಪಷ್ಟವಾಗಿ ಹೇಳುವುದಾದರೆ ಎಡೆಬಿಡದ ಗ್ರಂಥಗಳ ಓದು ಪರಿಪೂರ್ಣ ಮನುಷ್ಯರನ್ನಾಗಿ ಮಾಡಬಲ್ಲದು. ಓದುವುದೊಂದೇ ಮುಖ್ಯವಲ್ಲ; ಓದಿದ ಗ್ರಂಥಗಳ ಸಾರವನ್ನು ಗ್ರಹಿಸಿ, ಸಮಯೋಚಿತವಾಗಿ ಅನುಷ್ಠಾನಕ್ಕೂ ತಂದರೆ ಆಗ ಓದಿಗೆ ಬೆಲೆಯುಂಟು. ಗ್ರಂಥಗಳ ಓದಿನಿಂದ ಜ್ಞಾನಲಾಭದ ಜೊತೆಯಲ್ಲಿ ಕುಶಲತೆ, ಸೂಕ್ಷ್ಮ ದೃಷ್ಟಿ, ಮಾನಸಿಕ ಸ್ಥೈರ್ಯ, ವಿವೇಕಮಾರ್ಗ, ಮುಂದಾಲೋಚನಾ ಶಕ್ತಿಗಳು ಕುದುರುತ್ತವೆ. ಒಂದೊಂದು ಬಗೆಯ ಗ್ರಂಥದಲ್ಲೂ ಒಂದೊಂದು ಬಗೆಯ ವಿಚಾರ

ವಾಹಿನಿ ಇರುವುದರಿಂದ ಅವನ್ನು ಸ್ಥೂಲವಾಗಿಯೇ ಗ್ರಹಿಸಿದರೆ ಹೆಚ್ಚು ಉಪಯೋಗ ವೆಂಬುದನ್ನು ಹೇಳಬೇಕಾಗಿಲ್ಲವಷ್ಟೆ?.

ಓದಿನಿಂದ ಪ್ರಪಂಚದ ಸಾಮಾನ್ಯರಲ್ಲದೆ ಅಸಾಮಾನ್ಯ ವಿದ್ವಜ್ಜನರ ಆದರ್ಶಗಳು ಗುಣ, ನಡೆನಳಿಕೆ, ಅವರಿಂದ ಅನುಸರಿಸಿದ ಮಾರ್ಗ, ಪಟ್ಟಿರುವ ಶ್ರಮಗಳ ರೂಪು ರೇಖೆಗಳು ತಿಳಿಯಲ್ಪಡುತ್ತವೆ. ಇವು ಮಾತ್ರವಲ್ಲದೆ ಅವರ ಕುಶಲ ಕಲೆಗಳು, ವಿಜ್ಞಾನ ಸಂಸ್ಕೃತಿಗಳ ಚಿತ್ರಣವೂ ತಿಳಿಯಲ್ಪಡುವುವು. ಅವರು ಮಾಡಿದ ಜನಹಿತ, ದೇಶಹಿತ, ಅಭಿವೃದ್ಧಿಗಳ ಪರಿಸ್ಥಿತಿಯೂ ತಿಳಿಯುವುದು.

ಗ್ರಂಥಗಳು ವಿಶಾಲ ಪ್ರಪಂಚದ ಸರ್ವ ರಂಗಗಳಲ್ಲೂ ಮೇಧಾವಿಗಳು, ವಿಜ್ಞಾನಿ ಗಳು, ಯಂತ್ರಜ್ಞರು ನಡೆಸಿದ ಅಪೂರ್ವ ವಿಷಯದ ಬೋಧೆಯಾಗುತ್ತದೆ. ಇದರಿಂದ ಪ್ರಾಪಂಚಿಕ ಅನುಭವವು ಓದುಗರಿಗೆ ಲಭಿಸುವುದಿಲ್ಲವೇ?

ಗ್ರಂಥಗಳು ಅಮೂಲ್ಯ ಸಂಪತ್ತಿನಿಂದ ಕೂಡಿರುವ ಕಾರಣ ಓದುಗರ ಪಾಲಿಗೆ ಜ್ಞಾನಬೋಧೆಯ ಸಂಪತ್ತಿನಿಂದ ಕೂಡಿರುವುದೆನ್ನಲಡ್ಡಿಯಿಲ್ಲ, ಇದರಿಂದ ಸಾಹಿತ್ಯ ಬೆಳವಣಿಗೆಯ ಮಾರ್ಗದರ್ಶನವಾಗಿದೆ.

ಗ್ರಂಥಗಳ ಪಠಣೆಯಿಂದ ಬಗೆಬಗೆಯ ಗ್ರಂಥಕಾರರ ಕೃತಿಗಳ ಪರಿಚಯವಾಗು ತ್ತದೆ. ಅವರ ಗ್ರಂಥಗಳ ವಿಷಯ ನಿರೂಪಣೆ, ಆರಿಸಿದ ಪದಸಮುಚ್ಚಯ ಮಾನಸಿಕ ಭಾವನೆಗಳ ಸಾಮರ್ಥ್ಯ ಇವುಗಳ ಅರಿವಾಗುತ್ತದೆ.

ದಿವ್ಯಜ್ಞಾನವು ಪರಿಪುಷ್ಟಿಯಾಗಬೇಕಾದರೆ ಗ್ರಂಥಗಳ ಪಠಣೆ ಪ್ರೇರಕಶಕ್ತಿಯ ಸ್ಥಾನಕ್ಕೇರಬೇಕು. ಪ್ರಜ್ಞಾವಂತ ಕೃತಿರಚನಾಕಾರರು ಬರೆದ ಗ್ರಂಥಗಳು ಓದುಗರ ಎಡೆಬಿಡದ ಸಂಗಾತಿಗಳಾಗಿವೆ. ಅವರು ಸಮೀಪ ಇಲ್ಲದ ವೇಳೆಯಲ್ಲಿ ಗ್ರಂಥಗಳೇ ಸಂಗಾತಿಗಳ ಪ್ರತಿನಿಧಿಗಳಾಗಿ ಪರಿಣಮಿಸುತ್ತವೆ ಎಂದು ಹೇಳುವುದರಲ್ಲಿ ಸತ್ಯಾಂಶವಿದೆ.

ನಿಜವಾಗಿ ಹೇಳುವುದಾದರೆ ಗ್ರಂಥ ರಚನೆಕಾರರ ಕವಿತೆಗಳು, ವಚನಗಳು, ಬರೆದವರ ಅಂತರಂಗದ ಅಭಿಪ್ರಾಯವನ್ನು ಪ್ರತಿಬಿಂಬಿಸುವುವು. ಅವರ ವರ್ಣನೆಗಳು ವಿವರಿಸಿದ ಧಾಟಿ, ಬರೆದ ಉದ್ದೇಶ ಇವುಗಳನ್ನು ತಿಳಿಯಲು ಕುತೂಹಲವುಂಟಾಗು ವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಉತ್ತಮ ಗ್ರಂಥಗಳನ್ನು ಸ್ವಂತ ಭಂಡಾರದಲ್ಲಿ ಹೊಂದಿ ಪ್ರಯೋಜನ ಹೊಂದಿದರೆ ಅಲಭ್ಯ ಲಾಭವಲ್ಲವೇ?

ಮನಃಕ್ಲೇಶಗಳಿದ್ದಾಗ ಗ್ರಂಥಗಳು ನೆಚ್ಚಿನ ಗೆಳೆಯರು ಪಕ್ಕದಲ್ಲಿದ್ದಂತೆ! ಇವು ಮನಸ್ಸಿಗೆ ಶಾಂತಿಯೊದಗಿಸಿ, ದೇಹಕ್ಕೆ ತಂಪನ್ನು ನೀಡುವುವು. ಮನೋರಂಜನೆಯ ದೃಷ್ಟಿಯಿಂದಲೂ ಗ್ರಂಥಗಳು ಉಪಯುಕ್ತವೆಂದು ನಿಸ್ಸಂದೇಹವಾಗಿ ಹೇಳಬಹುದು.

ವಿಚಾರಪರವಾದ ಗ್ರಂಥಗಳ ಓದು ಮಿತ್ರರೊಂದಿಗೆ ಸರಸವಾಡುವಂತೆ, ಸಂತಸ ವನ್ನು ನೀಡಿ, ಮಾನಸಿಕ ತುಮುಲವನ್ನು ಹೊಡೆದೋಡಿಸುವ ಶಕ್ತಿ ಹೊಂದಿವೆ. ಹೀಗೆ ಪುಸ್ತಕಗಳ ಓದಿನಿಂದ ಉಂಟಾಗುವ ಆನಂದ, ರಮ್ಯತೆ, ಆತ್ಮತೃಪ್ತಿ ಇವುಗಳನ್ನು ವರ್ಣಿಸಲು ಸಾಧ್ಯವಿಲ್ಲ. ಪುಸ್ತಕಗಳ ಓದು ಹೆಚ್ಚಿದಷ್ಟೂ ಪರಿಶೋಧನೆಯ ಮನಸ್ಸು ಬುದ್ಧಿ ಉಲ್ಬಣತೆ ಹೆಚ್ಚುತ್ತದೆ. ಆಗ ಓದುಗರಿಗೆ ನವ ಚೈತನ್ಯ, ಹುರುಪು, ರಸಿಕತೆ ಅಧಿಕವಾಗುವುವು.

ಗ್ರಂಥಗಳ ಓದಿನಿಂದ ಜ್ಞಾನ, ಬುದ್ಧಿ. ವಿವೇಕ, ದೂರದರ್ಶಿತ್ವ ಹೆಚ್ಚುತ್ತದೆ. ಅಲ್ಲದೆ ಪರದೇಶದ ಜನರ ನಡೆ, ನುಡಿ, ಸ್ವಭಾವಗಳು ತಿಳಿಯುತ್ತವೆ. ಅವರ ಸಾಮಾಜಿಕ ಜೀವನ, ಸಂಸ್ಕೃತಿ, ಸ್ವಭಾವಗಳ ಅರಿವುಂಟಾಗುವುವು. ಅವರ ರಚನಾತ್ಮಕ ರಂಗಗಳಲ್ಲಿ ಸಾಧಿಸಿರುವ ಕಾರ್ಯಗಳ ವಿಹಂಗಮ ನೋಟವನ್ನು ಕಾಣಬಹುದು. ಹೀಗೆ ಗ್ರಂಥಗಳು ಜನರಿಗೆ ನೀಡುವ ಅಮೂಲ್ಯ ಕಾಣಿಕೆಗಳಂತಿವೆ. ಓದಿದ ಗ್ರಂಥಗಳ ಸಾರವನ್ನು ಸವಿದರೆ ಜೀವನ ನಾಟಕದಲ್ಲಿ ಸುಖ ಜೀವನವನ್ನು ನಡೆಸಬಹುದು. ಜ್ಞಾನವು ಸಾಧಾರಣ ಮನುಷ್ಯನನ್ನು ಅತ್ಯುತ್ತಮ ಮಟ್ಟಕ್ಕೇರಿಸುವುದರಲ್ಲಿ ಏನೂ ಸಂದೇಹವಿಲ್ಲ.

ಸುಜ್ಞಾನದಿಂದಲ್ಲವೇ ಪಾಶ್ಚಾತ್ಯವಿಜ್ಞಾನಿಗಳು ಚಂದ್ರಮಂಡಲಕ್ಕೆ ಹೋಗಿಬಂದುದು? ಮನುಜರಿಗೆ ಜ್ಞಾನದಿಂದಲೇ ಕಸವನ್ನು ರಸಮಾಡುವ ಬುದ್ಧಿಯುಂಟಾಗುತ್ತದೆ?

ಕೊನೆಯಲ್ಲಿ ಹೇಳಬೇಕೆಂದರೆ ಎಡೆಬಿಡದ, ರಚನಾತ್ಮಕ ಪುಸ್ತಕಗಳ ಓದಿನಿಂದ ಜನರಿಗೆ ರಸಿಕತೆ, ವಾಕ್ಚಾತುರ್ಯ, ಜಾಣ್ಮೆ, ಸನ್ಮಾರ್ಗ ದರ್ಶನ, ವಿವೇಕ, ವಿಶಾಲ ಮನೋಭಾವ, ಉತ್ತಮ ನಡಾವಳಿಗಳು ರೂಪುಗೊಳ್ಳುವುವು.

ಹೀಗಿರುವ ಕಾರಣದಿಂದ ಗ್ರಂಥಗಳ ಪಠಣವು ದಿವ್ಯ ಜ್ಞಾನದ ವೃದ್ಧಿಗೆ ಕಾರಣವಾಗಿದೆಯೆಂಬುದನ್ನು ತಿಳಿಯಬೇಕಾದ್ದು ಸಮಂಜಸವಾದುದು.

# ವಿಶ್ವ ವಿಖ್ಯಾತ ವಿನೋದಗಾರ ಚಾರ್ಲಿ ಚಾಪ್ಲಿನ್

## ಕಿರು ವಿವೇಚನೆ

—ಎಸ್. ಎಸ್. ಗದಗಕರ
ನವಲೂರು ಅಗಸಿ, ಶುಕ್ರವಾರಪೇಟೆ ಧಾರವಾಡ

Chaplin struggled through life to become world cinema's greatest legend'–sanjit.

ಅಮೇರಿಕೆಯ ಸುಖ್ಯಾತ ಸಾಮಾಜಿಕ ಇತಿಹಾಸಕಾರರಾದ ಆ್ಯಲಿಸ್ಟೇರ್ ಕುಕ್ ಅವರು ತಮ್ಮ ಪ್ರಬಂಧದಲ್ಲಿ ಚಾಪ್ಲಿನ್‌ರ ಬಗೆಗೆ ಇಂತು ಉಸುರಿರುವರು.

೧೯೨೦ ರಿಂದ ೧೯೩೦ ರ ವರೆಗಿನ ಕಾಲಾವಧಿಯಲ್ಲಿ ಚಾಪ್ಲಿನ್‌ನು ವಿಶ್ವದ ವಿಖ್ಯಾತ ವ್ಯಕ್ತಿಗಳಲ್ಲಿ ಒಬ್ಬನೆನಿಸಿದ್ದನು. ಇನ್ನಾವ ದೇಶದವನನ್ನು ಆಯ್ಕೆ ಮಾಡಿದರೂ ಇವನಂತಹ ಅಂತಾರಾಷ್ಟ್ರೀಯ ಘನತೆ ಸಾಧಿಸಿರುವುದಿಲ್ಲ, ಜಪಾನಿನ ರಾಜಕುಮಾರ ಉಡ್ರೋ ವಿಲ್ಸನ್, ಗ್ರೀಸಿನ ರಾಜಕುಮಾರ, ನಿಜಿಂಸ್ಕಿ, ಲಾರ್ಡ್‌ಮೌಂಟ್‌ಬ್ಯಾಟನ್, ಫ್ರಾಂಕ್ಲಿನ್ ರೂಝುವೆಲ್ಟ್, ಆಲ್ಬರ್ಟ್, ಐನ್‌ಸ್ಟನ್, ಪಂಡಿತ ನೆಹ್ರೂ, ಕ್ರುಶ್ಚೆವ್, ಜ್ರೀನ್‌ಕಾಕ್‌ಟ್ಸು, ಚೌಎನ್‌ಲೈ ಮುಂತಾದ ಮುಂದಾಳುಗಳಿಗೆ ಸರಿದೊರೆ ಏನೋ ಎಂದು ಲೆಕ್ಕ ಹಾಕಿದರೂ ಚಾಪ್ಲಿನ್ ಮುಂದು!"

ಕೇವಲ ಇದು ಪ್ರಶಂಸೆಯಲ್ಲ. ಬಡತನದಲ್ಲಿ ಬೆಳೆದ ಇಂತಹ ಒಬ್ಬನ ಜೀವನ ನಿಜಕ್ಕೂ ಅಭ್ಯಾಸಾರ್ಹವಾಗಿದೆ. ಪಾಪ! ಚಾಪ್ಲಿನ್‌ನಿಗೆ ಒಪ್ಪತ್ತಿನ ಊಟಕ್ಕೆ ಗತಿ ಇರಲಿಲ್ಲ. ಇದೊಂದು ಸಾಮಾಜಿಕ ಕಳಂಕ ಹುಡುಗನಿಗೆ, ಬಾಲ್ಯಾವಸ್ಥೆ ನೆನಪಾಗಿ ಹಿಂದುಗಡೆ ಆವನಿಗೆ ಕಣ್ಣೀರು ಒಸರುತ್ತಿದ್ದವು.

**ನಾಜೂಕು ಆರೋಗ್ಯ :** ಚಾಪ್ಲಿನ್‌ನು ೧೮೮೯ನೆಯ ಇಸ್ವಿ ಎಪ್ರಿಲ್ ತಿಂಗಳಲ್ಲಿ ಮಧ್ಯಮ ತರಗತಿಯ ಮನೆತನ ಒಂದರಲ್ಲಿ ಜನ್ಮತಾಳಿದನು. ತಾಯಿ ರಂಗಭೂಮಿಯ ನಟಿ ತಂದೆ ಶಾಂತ ಪ್ರಕೃತಿಯ ಪ್ರಾಣಿ. ಅವನು ಕಲಾವಿದನೇ ಇಬ್ಬರ ಗಳಿಕೆಯಿಂದ ಮನೆ ಹೇಗೋ ನಡೆಯುತ್ತಿತ್ತು. ಆದರೇನು? ಚಾರ್ಲಿಯ ತಂದೆ ಕುಡುಕ. ಆಗಿನ ಕಲೋಪಾಸಕರೆಲ್ಲ ಬಹುಶಃ ಈ ನಾದಕ್ಕೆ ಬಲಿ ಬಿದ್ದವರೆ. ಮೇಲೆ ಲುಯಿಸ್ ಎಂಬ ಒಡತಿ ಬೇರೆ! ಈ ಮೂಲಕ ವಿಶೇಷವಾಗಿ ಮನೆತನವನ್ನು

ರಕ್ಷಿಸುವದು ಆಗುತ್ತಿರಲಿಲ್ಲ. ಆದರೆ ಅವನು ದಯಾಳು ಚಾರ್ಲಿ ಹಾಗೂ ಸಿಡ್ನಿ ಈರ್ವರ ಹಿತಚಿಂತನೆ ಮಾಡುತ್ತಿದ್ದ. ಈ ಸಿಡ್ನಿ ಎಂದರೆ ಸೋದರ. ಒಡಹುಟ್ಟಿದವನಲ್ಲ!

ಚಾಪ್ಲಿನ್‌ನ ತಾಯಿ ತನ್ನ ಅಲ್ಪ ಗಳಿಕೆಯಲ್ಲಿ ಮನೆಯನ್ನು ನೋಡಿಕೊಳ್ಳಲು ಬಹಳ ಪೇಚಾಡುತ್ತಿದ್ದಳು. ಅದಕ್ಕಾಗಿಯೆ ಆಕೆಯ ಆರೋಗ್ಯ ಕೆಟ್ಟಿತು. ಸೊರಗಿ ಕಡ್ಡಿ ಆದಳು. ಆಸ್ಪತ್ರೆಗೆ ಸೇರಿಸಲಾಯಿತು. ದೂರ ಇದ್ದಾಗಲೂ ಸೋದರರಲ್ಲಿ ಹಾರ್ದಿಕ ಪತ್ರ ವ್ಯವಹಾರ ಸಾಗುತ್ತಿತು.

ರಂಗಭೂಮಿಯ ಸೇವೆ:— ಆಕಾಲಕ್ಕೆಂದರೆ ಸೋದರರು ರಂಗ ಭೂಮಿಯ ಸೇವೆಗೆ ಮನಸಾ ಅಣಿ ಆಗಿದ್ದರು. ಐದು ವರ್ಷದವನಿರುವಾಗಲೆ ಚಾರ್ಲಿನಟನೆಗೆ ಮಾರು ಹೋದ ಆ ಕಂಪನಿಯ ಜಾಕ್ ಸನ್‌ರದು. Eight Lancashire Lads' ನಾಟಕದ ಹೆಸರು. ಅನಂತರ Jim' Romance of a cockney' ಹಾಗೂ ಶೆರ್‌ಲಾಕ್ ಹೋಮ್ಸ್‌ನ ಮಕ್ಕಳ ನಾಟಕಗಳಲ್ಲಿ ಕಿರು ಪಾತ್ರಗಳನ್ನು ವಹಿಸಿದನು. ಬಾಲನಟನೆಂದು ಕೀರ್ತಿಯೂ ಕೂಡ ಬಂದಿತು. ಪತ್ರಿಕೆಗಳನೇಕ ಬಾಯಿ ತುಂಬ ಹೊಗಳಿದರು ಚಾರ್ಲಿಯ ಉತ್ಸಾಹ ಕೌಶಲ್ಯಗಳನ್ನು!

ಮುಂದೆ ಒಂದು ವಾರದ ನಂತರ ಚಾರ್ಲಿಗೆ ಬೇರೊಂದು ನಗೆ ನಾಟಕ "Put on a comedy make up„ ಎಂಬಲ್ಲಿ ಅಭಿನಯಿಸಲು ಅವಕಾಶ ಸಾಧಿಸಿತು. ಆಗಿನ ಅವನ ವೇಷ ಭೂಷ ವಿಲಕ್ಷಣ. ಚೀಲದಂತಹ ಚೊಣ್ಣ, ಅಖಂಡ ಬೂಟು. ಕೈಯ್ಯಲ್ಲೊಂದು ಕೋಲು ಡರ್ಬಿಹ್ಯಾಟ್. ವಯಸ್ಸಾದಂತೆ ತೋರಲು ಕಿರು ಮೀಸೆ. ಇಂತು ರಂಗಕ್ಕೆಂದೇ ಅವನದು ಹೇಳಿ ಮಾಡಿಸಿದ ವೇಷ ರೂಪ!

ವಿನೋದಿ ಸರಣಿ—: ಚಾಪ್ಲಿನ್‌ನದು ಪ್ರದೀರ್ಘ ಅಭಿನಯ ಕಾಲ. ಸುಮಾರು ಐವತ್ತೆರಡು ವರ್ಷ ಅವನು ಸಿನೇಮಾ ಸಾಮ್ರಾಜ್ಯದಲ್ಲಿ ನಟಿಸಿದನು. ದಿನಗಳೆದಂತೆ ಅವನ ಅಂತಾರಾಷ್ಟ್ರೀಯ ಘನತೆ ವರ್ಧಿಸಿತು.

೧೯೨೩ ರಲ್ಲಿ ಅವನು ಕಲಾವಿದರ ಮಂಡಲಕ್ಕೆ ಸೇರ್ಪಡೆಯಾದನು. ಡಗ್ಲಾಸ್ ಫೇರ್ ಬ್ಯಾಕ್ಸ್, ಗ್ರಿಫಿಥ್, ಹಾರ್ಟ್ ಮುಂತಾದವರು ಅದರ ಪ್ರಮುಖ ಸದಸ್ಯರು. The cold rush' ಎಂಬ ಚಾಪ್ಲಿನ್‌ನ ಚಿತ್ರ ಅಪಾರ ಸಂಪತ್ತು ತಂದಿತು. ಹಿಂದಿನ ಹಾನಿ ಕೂಡ ತುಂಬಿ ಕೊಟ್ಟು ನಿರ್ಮಾತೃಗಳನ್ನು ಧನ್ಯವಾಗಿಸಿತು!

ವಿಷಾದ ಅಂಶ–: ಚಾಪ್ಲಿನ್‌ನ ಚಿತ್ರ ಪಟ ಜೀವನವು ರೋಮಹರ್ಷಕವೂ ಲಾಭದಾಯಕವೂ ಎನಿಸಿದಂತೆ ವೈಯ್ಯಕ್ತಿಕ ಬಾಳು ಸುಗಮ ಆಗಿರಲಿಲ್ಲ. ಅಲ್ಲಿ

ವಿಷಾದದ ತೆರೆ ಬಿದ್ದಿತ್ತು. ಈ ಶತಮಾನದ ಎರಡನೆಯ ಮೂರನೆಯ ದಶಕಗಳಲ್ಲಿ ಅವನು ರಸಿಕರ ಪ್ರೀತಿಗೆ ಪಾತ್ರವಾಗಿದ್ದುದು ನಿಜ. ಆದರೆ ಮುಂದಿನ ದಶಕದಲ್ಲಿ ಅದೇ ಜನತೆ ತಿರುಗಿ ಬಿದ್ದಿದು ದುರ್ದೈವ! ಅವನ ಮೇಲೆ ಸಾಹಿತ್ಯಿಕ ಕಳವಿಯ ದೋಷಾರೋಪಣ ನಡೆಯಿತು. ಅವನು ನ್ಯಾಯಾಲಯಕ್ಕೆ ಬರಬೇಕಾಯಿತು. ಈ ಮಹಾ ಸಾಹಿತ್ಯಕ ಸಾಮ್ರಾಟನು ತನ್ನ ಪರವಾಗಿ ವಾದಿಸಬೇಕಾಗಿ ಬಂದಿತು. ವಿಧಿ ವಿಲಾಸ! ಅಮೇರಿಕೆಯ ನೋಬೆಲ್ ಪಾರಿತೋಷಕ ವಿಜೇತ ಖ್ಯಾತ ನಾಟಕಕಾರ ಯುಜಿನ್ ಓನೆಲ್‌ರ ಮಗಳೊಡನೆ ಮೂರನೆಯ ವಿವಾಹವಾಗಿ ಬಿಡುಗಡೆ ಆಯಿತು. ಹಿಂದಿನವೂ ಹೀಗೆಯೆ ಅವನನ್ನು ವಿವೇಚನೆಗೀಡು ಮಾಡಿದವು. ಒಟ್ಟು ವೈವಾಹಿಕ ಜೀವನ ಸುಖಕ್ಕೆ ಅವನು ಎರವು ! ಅನಂತರ ಅಮೇರಿಕಾ ಸರ್ಕಾರವು ಆದಾಯಕರ ವಿಷಯದಲ್ಲಿ ಇವನಿಗೆ ಪೇಚುತಂದಿತು. ಎದರಾಳಿಗಳು ಹೀಗೆ ಬೆಳೆ ಬೆಳೆದು ಚಾಪ್ಲಿನನು ಸಂಯುಕ್ತ ಅಮೇರಿಕೆಯ ಗಡಿಯಲ್ಲಿ ಇನ್ನು ಮುಂದೆ ಕಾಲಿಡಲಾಗದ ವಿಪರೀತ ಪರಿಸ್ಥಿತಿ ಸಂಪ್ರಾಪ್ತವಾಯಿತು. ಎಂಥಕುತ್ತುಗಳು ವಿಶ್ವ ಬಂಧು ನಗೆಗಾರನಿಗೆ !

**ನಿಷ್ಕಪಟಿ:—** ಹೆಂಗಳೆಯರ ವಿಷಯದಲ್ಲಿ ಚಾಪ್ಲಿನನು ಅತೀವ ಸರಳ ನಿಷ್ಕಪಟಿ. ಅವನೆಂದರೆ ಯುವತಿಯರಿಗೆ ವಿಶೇಷ ಆಸಕ್ತಿ, ಆಕರ್ಷಣೆ ಇದೆಲ್ಲ ಆರಂಭದ ದಿಸೆ ಆಯಿತು. ಆದರೆ ಕಾಲಾಂತರದಲ್ಲಿ ವಿರಸ ಭಾವಕ್ಕೆ ಮೊದಲಾಗುತ್ತಿತ್ತು. ಈ ಬಗೆಯಾಗಿ ಅವನು ನಾಲ್ಕು ಸಲ ವಿವಾಹವಾದ. ಮಿಲ್ಡ್ರಿಡ್‌ಹ್ಯಾರಿಸ್ ಇವಳೊಡನೆ ೨೯ನೆಯ ವಯಸ್ಸಿಗೆ ಲಿಟಾಗ್ರೆಯೊಡನೆ ೩೫-ವರ್ಷದವನಿರುವಾಗ, ಊನಾ ಓನೆಲ್‌ಳೊಡನೆ ೫೪ನೆಯ ವಯಸ್ಸಿಗೆ ನಂತರ ನಾಲ್ಕನೆಯ ವಿವಾಹ. ಚಾಪ್ಲಿನನು ಫಿಲ್ಮ್ ತಯಾರಕರೊಡನೆ ವ್ಯಾವಹಾರಿಕವಾಗಿ ನಡೆದು ಕೊಳ್ಳುತ್ತಿದ್ದ. ಪ್ರಸಂಗ ಬಿದ್ದಾಗ ಖಟ್ಟು ನಿಟ್ಟು ಉತ್ತರ. ಈ ಮೂಲಕ ಒಮ್ಮೊಮ್ಮೆ ಗೆಳೆತನಕ್ಕೆ ವ್ಯತ್ಯಯ ಉಂಟಾಗುತ್ತಿತ್ತು. ಒಟ್ಟು ಲಹರಿಯ ಮನುಷ್ಯನೇ ಸರಿ ! ನಾಳಿನ ಚಿಂತೆ ಇರಲಿಲ್ಲ ಸಿರಿವಂತಿಕೆ ಕ್ಷಣಿಕ ಎಂಬ ಅರಿವೂ ಅವನಿಗಿದ್ದಿತು. ಒಮ್ಮೊಮ್ಮೆ ಅಪಾರ ಸಂಪತ್ತು ಬಂದಾಗಲೂ ಅವನ ಜೀವನ ರೀತಿ ನೀತಿಗಳಲ್ಲಿ ಏರಿಳಿತ ಇರಲಿಲ್ಲ. ಸ್ಥಿತ ಪ್ರಜ್ಞ ! ಇಂದಲ್ಲ ನಾಳೆ ದಾರಿದ್ರ್ಯ ಬೆನ್ನಟ್ಟೀತೇ ಎಂಬ ಭಯವೆ? ಇದ್ದೀತು!

**ಚಿತ್ರರಂಗಂಗದ ಅಸಭಿಷಕ್ತ ಸಾಮ್ರಾಟ :—** ೧೯೭೭ ರಲ್ಲಿ ಸ್ವಿಟ್ಜರ್ಲಂಡಿನ ವೆವ್ಹಿಯಲ್ಲಿ ಜಾಪ್ಲಿನ್‌ನು ಸಾಯಲು ಕೀರ್ತಿ, ಹಣ ಸಾಕಷ್ಟು ಲಭಿಸಿದ್ದವು. ಅಮೇರಿಕೆಯಿದಂತೂ ೧೯೫೨ ರಲ್ಲಿ ಬಿಡುಗಡೆ ಆಗಿತ್ತು. ಜಾರ್ಜ್‌ಬರ್ನಾಡ್‌ಷಾರವರು ಜಾಪ್ಲಿನ್‌ನನ್ನು ವಿಶೇಷವಾಗಿ ಪ್ರಶಂಸಿಸಿದ್ದರು. ಸಿನಿಮಾ ರಂಗದ ಏಕಮೇವಾದ್ವಿತೀಯಕಲಾವಿದ ಎಂಬ ಗೌರವ ಸಣ್ಣದಿರಲಿಲ್ಲ! ಯು. ಪಿ. ಆಯ್ ವಾರ್ತಾ ಸಂಸ್ಥೆ ಹೀಗೆ ಪ್ರಕಟಿಸಿತು ಮರಣಾನಂತರ— ಮಾನವನ ಸುಖ ದುಃಖಗಳ ಏರಿಳಿತಗಳನ್ನು ಚಿತ್ರಿಸುವಲ್ಲಿ

ಚಾಪ್ಲಿನ್‌ನು ಅಸಾಧಾರಣ ಕಲಾವಿದ. ಲೇಕ್ ಜಿನೇವಾದ ಎದುರಿಗಿನ ಸ್ವಂತದ ಬಂಗ್ಲೆಯಲ್ಲಿ ಸುಖದಿಂದ ಅವನು ಕೊನೆಯುಸಿರೆಳೆದನು. ಸಾಯುವಾಗಿನ ವಯಸ್ಸು ಲಲ. ಸಾಕಷ್ಟು ವೃದ್ಧಾಪ್ಯ. ಎಂತಹ ಪ್ರಶಾಂತ ಮರಣ ಎಂದು ಚಾಪ್ಲಿನ್‌ನ ಕುಟುಂಬದ ವೈದ್ಯರು ಉದ್ಗಾರ ತೆಗೆದರು! ಕ್ರಿಸ್‌ಮಸ್ ಹಬ್ಬದ ದಿನದ ಮುಂಜಾವು ಆ ನಾಲ್ಕರ ಸಮಯ ಮಂಗಲಮಯ!

ಚಾಪ್ಲಿನ್‌ನು ತನ್ನ ಕ್ಷೇತ್ರದಲ್ಲಿ ಅಷ್ಟು ದೂರದರ್ಶಿ ಅಲ್ಲ. ಆದರೆ ಜನತೆಯ ಹೃದಯ ಸೂರೆಗೊಂಡ. ಅಸಂಖ್ಯಾತ ರಸಿಕರಿಗೆ ಅವನು ನಿರಂತರ ನಗೆಯ ಕಾರಂಜಿ ಆಲ್ಹಾದವ ಆಗದ. ಕೊನೆ ಕೊನೆಯ ಚಿತ್ರಗಳಲ್ಲಿ ತಾತ್ವಿಕತೆ ತಲೆ ಎತ್ತಿದುದೂ ನಿಜ. ಅವನ ಏಕಪಾತ್ರಾಭಿನಯಗಳು ನಗೆಯ ನೆಲೆವೀಡು. ಆ್ಯಲಿಸ್ಟರ್‌ಕುಕ್‌ರು ಅವನ ಬಗೆಗೆ ಉಸುರಿದ ಮಾತುಗಳು ಅತ್ಯಂತ ಗಮನಾರ್ಹ.

ಅವನು ಜಾಗತಿಕ ನಗೆಗಾರನೆಂಬಲ್ಲಿ ಸ್ತ್ರೋಕಾಂಶರ ಸಂದೇಹವಿಲ್ಲ. ಅವನು ಮಾತು ಅಖಂಡ ಜೇಯ. ನಟನೆ ಅಪ್ರತಿಮ. ಯಾರಿಗೂ ಸೊಪ್ಪು ಹಾಕದ ಆ ವ್ಯಕ್ತಿ ನಿಜಕ್ಕೂ ನೈಜ ಕಲಾವಿದ.

ಇದೀಗ ಚಾಪ್ಲಿನ್‌ನ ಬಾಳು, ರಸಮಯ ಬಾಳು, ನಗೆಯ ಬುಗ್ಗೆ!

[ಆಧರಿಸಿದುದು]

# ಶಿವಾಗಮ ಪುರಾಣಗಳಲ್ಲಿ
# ವೀರಶೈವಧರ್ಮದ ಪ್ರಾಶಸ್ತ್ಯ

:—ಶ್ರೀ ಷ॥ ಬ್ರ॥ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು.
ಹಳ್ಳಿಯಾಳ

ವೀರಶೈವಧರ್ಮ ವಿಶಾಲಧರ್ಮ, ಜ್ಞಾನಕ್ರಿಯಾ ಸಮನ್ವಯ ತತ್ವಸಂಯೋಜನೆ. ವೀರಶೈವರಿಗೆ ಅಷ್ಟಾವರಣ ಅಂಗಗಳಾಗಿ, ಪಂಚಾಚಾರ ಪ್ರಾಣವಾಗಿ, ಅದುವನ್ನು ನೀಡುವ ಷಟ್ಸ್ಥಲಗಳು ಆತ್ಮಗಳಾಗಿವೆ. ಪರಿಪಾಲನೆಯ ಪರಿಸರದ ಹಕ್ಕಿನಲ್ಲಿ ಗಂಡು-ಹೆಣ್ಣೆಂಬ ಬೇಧವಿಲ್ಲದೇ ಸರಿಸಮಾನಧಿಕಾರವುಂಟು. ಆದ್ದರಿಂದ ಇದು ಎಲ್ಲ ಧರ್ಮಗಳಿಗಿಂತಲೂ ವಿಶಿಷ್ಟವಾದ ಸ್ಥಾನಮಾನಗಳನ್ನು ಹೊಂದಿದೆ. ಇಂಥ ವಿಶಿಷ್ಟ ಸ್ಥಾನ ಹೊಂದಲು ವೇದಗಳು, ಶಿವಾಗಮಗಳು, ಪುರಾಣಗಳು ಮತ್ತು ಶಾಸ್ತ್ರಗಳು ಮೂಲಾಧಾರ ಸಾಕ್ಷಿಗಳಾಗಿವೆ. ಇವುಗಳಲ್ಲಿ ಉಕ್ತವಾಗಿರುವ ವೀರಶೈವ ಧರ್ಮದ ಪ್ರಾಶಸ್ತ ಮತ್ತು ಶಿವಲಿಂಗಧಾರಣೆಯ ಪ್ರಾಮುಖ್ಯತೆಯನ್ನು ತಿಳಿದುಕೊಳ್ಳುವುದು ಅತ್ಯಂತ ಸೂಕ್ತವಾಗಿದೆ.

ಲೋಕದಲ್ಲಿ ಸಾವಿರಾರು ಜನ ದೇವಾನುದೇವತೆಗಳಿದ್ದರೂ ಅವರೆಲ್ಲರು ಅಲ್ಪ ಮತ್ತು ತಾತ್ಪೂರ್ತಿಕ ಫಲವನ್ನು ಕೊಡುವರಾಗಿದ್ದರಿಂದ ಅವರ ಅನುಸರಣವನ್ನಾಗಲಿ, ಅವರಿಂದ ದೊರೆಯುವ ಫಲವನ್ನಾಗಲಿ ಕನಸಿನಲ್ಲೂ ಕೂಡಾ ಬಯಸಲಾರನೆಂದು 'ಶಿವಾನಂದ ಲಹರಿಯಲ್ಲಿ ಶ್ರೀ ಶಂಕರಾಚಾರ್ಯರು ಸ್ಪಷ್ಟವಾಗಿ ತಿಳಿಸಿದ್ದಾರೆ. ಹರಿ ಬ್ರಹ್ಮಾದಿಗಳು ಇವನ ನೆಲೆಯನ್ನರಿಯದೇ ನಿರಾಶರಾದರು. ಆದ್ದರಿಂದ ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕನಾದ ಪರಶಿವನು ಸರ್ವೋತ್ತಮನಾಗಿದ್ದಾನೆ. ಅಂಥ ಪರ ಶಿವನ ಕುರುಹು ಗುರುಗಳಿಂದ ಕ್ರಿಯಾ, ಮಂತ್ರ, ವೇದ ದೀಕ್ಷೆಗಳಿಂದ ಶಿಷ್ಯನ ಹಸ್ತ ಕಮಲದಲ್ಲಿ ವಿರಾಜಮಾನವಾಗಿದೆ. ಇದು ಶಿವನ ಸಾಕ್ಷಾತ್ ಸಾಕಾರ ಸದ್ರೂಪವಾಗಿದೆ. ಯಾವ ಪ್ರಕಾರವಾಗಿ ಖಾದಿ ಬಟ್ಟೆ ರಾಜಕೀಯ ವ್ಯಕ್ತಿಗಳ, ಖಾಕೀ ಸರ್ಕಾರಿ ಗುಮಾಸ್ತರ, ಕಾವಿ ಸನ್ಯಾಸಿಗಳ, ಮಾಂಗಲ್ಯ ಮುತ್ತೈದೆಯ ಕುರುಹು ಹೇಗೋ ಹಾಗೆಯೇ ವೀರಶೈವ ಧರ್ಮದ ಕುರುಹು ಇಷ್ಟಲಿಂಗಧಾರಣೆಯಾಗಿದೆ. ಆ ಕುರುವನ್ನು ಹಿಡಿದು ಅರುವು ಕಂಡು ಸಮರಸದಲ್ಲಿ ಅಮರರಾಗಬೇಕಾಗಿದೆ. ವೀರಶೈವರಲ್ಲಿ ಸ್ಥಾವರ ಮತ್ತು ಇಷ್ಟ ಎಂದು ಎರಡು ವಿಧವಿದ್ದರೂ ಇಷ್ಟಲಿಂಗ ಪೂಜೆಗೆ ಬಹುಮುಖ್ಯ ಸ್ಥಾನ

ಇದೆ. ಹಾಗಾದರೆ ಆಗಮಗಳಲ್ಲಿ ಪುರಾಣಗಳಲ್ಲಿ ವೀರಶೈವ ಧರ್ಮ ಎಷ್ಟರಮಟ್ಟಿಗೆ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ ಎಂಬುದನ್ನು ತಿಳಿಯುವುದು ಬಹು ಮುಖ್ಯವಾಗಿದೆ.

ವಾತುಲಾಗಮದ 10ನೆಯ ಪಟಲ 32ನೆಯ ಶ್ಲೋಕದಲ್ಲಿ—

"ಮೂರ್ಧ್ನಿ ಕಂಠೇ ಭುಜೇ ಹಸ್ತೇ ಹೃತ್ಸ್ಥಲೇ ನಾಭಿಮಂಡಲೇ ।
ಏತೇಷಾಮೇಕದೇಶೇ ತು ಧಾರಯೇಚ್ಚೈವ ಲಿಂಗಕಂ" ॥

ಅಂದರೆ ಲಲಾಟದಲ್ಲಿ, ಕಂಠ, ಬುಜ(ರಟ್ಟೆ), ಹಸ್ತ, ಹೃದಯ ಮತ್ತು ನಾಭಿಮೇಲ್ಭಾಗದಲ್ಲಿ ಶಿವಲಿಂಗವನ್ನು ಧರಿಸಬೇಕೆಂತಲೂ, ವೀರಾಗಮದ 3ನೆಯ ಪಟಲ 23ನೆಯ ಶ್ಲೋಕದಲ್ಲಿ—

"ಗುರೋಶ್ಚ ಜಂಗಮಶ್ಚೈವ ಶಿವಲಿಂಗಸ್ಯ ಪೂಜನಂ"

ಅಂದರೆ ಪರಶಿವನ ಸಾಕಾರ ರೂಪಗಳಾದ ಗುರುಗಳನ್ನು, ಜಂಗಮರನ್ನು ಮತ್ತು ಶಿವಲಿಂಗವನ್ನು ಪೂಜಿಸಬೇಕೆಂತಲೂ, ಪಾರಮೇಶ್ವರಾಗಮದ 1ನೆಯ ಪಟಲ 42ನೆಯ ಶ್ಲೋಕದಲ್ಲಿ—

"ನ ವೀರಶೈವ ಸದೃಶಂ ಮತಮಸ್ತಿ ಜಗತ್ತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ॥

ಅಂದರೆ ವೀರಶೈವಧರ್ಮಕ್ಕೆ ಸರಿಸಮಾನವಾದ ಧರ್ಮ ಮೂರು ಲೋಕದಲ್ಲೂ ಇಲ್ಲ ಮತ್ತು ಎಲ್ಲ ಐಶ್ವರ್ಯ ಪಡೆಯಲು ಮತ್ತು ಶಿವಸಾಯುಜ್ಯ ಹೊಂದಲು ಅತ್ಯಂತ ಪುಣ್ಯಕರವಾಗಿದ ಎಂಬುದಾಗಿ ತಿಳಿಸುತ್ತದೆ.

ಶಿವಾಗಮಗಳಲ್ಲಿ ವೀರಶೈವ ಧರ್ಮಕ್ಕೆ ಮತ್ತು ಶಿವಲಿಂಗಧಾರಣೆಗೆ ಪ್ರಮುಖ ಸ್ಥಾನವಿರುವಂತೆ ಪುರಾಣಗಳಲ್ಲೂ ಸಹ ಪ್ರಾಮುಖ್ಯತೆಯನ್ನು ಕಾಣಬಹುದಾಗಿದೆ, ಶಿವಪುರಾಣ ವಿದ್ಯೇಶ್ವರ ಸಂಹಿತೆಯ 16ನೆಯ ಅಧ್ಯಾಯದ 159ನೆಯ ಶ್ಲೋಕದಲ್ಲಿ—

"ಶಿವಭಕ್ತೋ ವಸೇನ್ನಿತ್ಯಂ ಶಿವಲಿಂಗಂ ಸಮಾಶ್ರಿತಃ ।
ಸ್ಥಾಣುಲಿಂಗಾಶ್ರಯೇಣೈವ ಸ್ಥಾಣುರ್ಭವತಿ ಭೂಸುರಾಃ ॥

ಅಂದರೆ ಶಿವಭಕ್ತನಾದವನು ಸದಾ ಶಿವಲಿಂಗ ಧರಿಸಬೇಕೆಂತಲೂ, ಅದನ್ನು ಆಶ್ರಯಿಸುವುದರಿಂದ ಅಥವಾ ಪೂಜಿಸುವುದರಿಂದ ಇವನೇ ಅವನಾಗುವನು.

ಲಿಂಗಪುರಾಣದ ಉತ್ತರಭಾಗ 21ನೆಯ ಅಧ್ಯಾಯದ 83ನೆಯ ಶ್ಲೋಕದಲ್ಲಿ

"ಹಸ್ತಮಸ್ತಕಸಂಯೋಗಾದ್ವೇಧೇತಿ ಪರಿಗೀಯತೇ ।
ಗುರುಣೋದೀರಿತಾ ಕರ್ಣೇ ಯಾ ಸಾ ಮಂತ್ರೇತಿ ಕಥ್ಯತೇ ॥
ಶಿಷ್ಯಪಾಣಿ ತಲೇದತ್ತಾ ಯಾ ದೀಕ್ಷಾ ಸಾ ಕ್ರಿಯಾ ಮತಾ ॥

ಅಂದರೆ ಶ್ರೀಗುರುವು ಹಸ್ತಮಸ್ತಕ ಸಂಯೋಗಮಾಡಿ ಶಿಷ್ಯನ ಕರದಲ್ಲಿ ಕರದಿಷ್ಟಲಿಂಗವನ್ನಿಟ್ಟು ಕಿವಿಯಲ್ಲಿ ಶಿವಪಂಚಾಕ್ಷರಿ ಮಂತ್ರವನ್ನು ಅರುಹಿ ದೀಕ್ಷೆಯನ್ನು ಅನುಗ್ರಹಿಸುವನೆಂದರ್ಥ.

"ಬ್ರಹ್ಮಾವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥

ಅಂದರೆ ಪೂರ್ವದಲ್ಲಿ ಬ್ರಹ್ಮವಿಷ್ಣ್ವಾದಿಯಾಗಿ ದೇವಾನುದೇವತೆಗಳು ಮತ್ತು ಮುನಿಗಳು ಸಹ ಶಿವಲಿಂಗವನ್ನು ವಿಶೇಷವಾಗಿ ಮಸ್ತಕದಲ್ಲಿ ಧರಿಸಿ ಶಿವನ ಆರಾಧಕರಾಗಿದ್ದರೆಂಬುದು ಸ್ಪಷ್ಟ ತಿಳಿಯುತ್ತದೆ. ಇದಕ್ಕೆ ನಿದರ್ಶನವಾಗಿ ಇಂದಿಗೂ ಜಗತ್ಪ್ರಸಿದ್ಧವಾದ ಪಂಡರಪುರದ ವಿಠೋಬನಾಮಕದ ವಿಷ್ಣುಮೂರ್ತಿ ಮಸ್ತಕದಲ್ಲಿ, ಬಾರ್ಶಿ ಭಗವಂತನಾಮಕ ವಿಷ್ಣುಮೂರ್ತಿಯ ಮಸ್ತಕದಲ್ಲಿ ಮತ್ತು ಸೆಂಡೂರ ಕುಮಾರಸ್ವಾಮಿ, ತುಳಜಾಪೂರದ ಭವಾನಿ, ಗುಡ್ಡಪುರದ ದಾನಮ್ಮ ದೇವತೆಗಳ ಮಸ್ತಕದಲ್ಲಿ ಶಿವಲಿಂಗವನ್ನು ಕಾಣಬಹುದಾಗಿದೆ

ಇವೆಲ್ಲ ಅಂಶಗಳನ್ನು ಗಮನಿಸಿದಾಗ ಪೂರ್ವದಲ್ಲಿ ಲಿಂಗಸತ್ವದ ಬೆಳಕು ಎಷ್ಟಿತ್ತು ಮತ್ತು ವೀರಶೈವ ಧರ್ಮದ ಉಜ್ಜ್ವಲತೆಯ ಅರಿವು ಸರ್ವರಿಗೂ ಉಂಟಾಗುತ್ತದೆ. ಆದರೆ ಇಂದು ಕಲಿಪ್ರಭಾವದಿಂದ ಧರ್ಮ ಜೀರ್ಣವಾಗುತ್ತಿದೆ. ಆದ್ದರಿಂದ ಪೂರ್ವಜರಿಂದ ಪ್ರಶಂಸನೀಯವಾದ ಸದ್ಧರ್ಮವನ್ನು ಪ್ರತಿಯೊಬ್ಬರು ತಪ್ಪದೇ ಪಾಲಿಸಬೇಕು. ಅಂದಾಗ ಮಾತ್ರ ಸರ್ವರಿಗೂ ಮಂಗಲವಾಗುತ್ತದೆ. ಅಂಥ ಸದ್ಬುದ್ಧಿಯನ್ನು ಎಲ್ಲರಿಗೂ ಪರಶಿವನು ದಯೆತೋರಲಿ!

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ.

ನಿಟ್ಟೂರು–ಚೇಳೂರು ಮಾರ್ಗ ಬದಿಯಲ್ಲೊಂದು ಪ್ರಶಾಂತ ಗ್ರಾಮ ಎಸ್. ರಾಮಪುರ. ನಿಸರ್ಗದ ಮಡಿಲಕೂಸು, ಮುಗ್ಧ ಜನತೆಯ ಬೀಡು, ಭಕ್ತಿಯಾಗರ. ಅಲ್ಲಿ ಬಸವಜಯಂತಿ ಉತ್ಸವ. ತಾ14-12-84ರಂದು ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಶ್ರದ್ಧಾ ಭಕ್ತಿಪೂರ್ವಕ ತುಂಬು ಉತ್ಸಾಹದ ಸ್ವಾಗತ. ಕಾರ್ಯಕ್ರಮ ಕ್ಲುಪ್ತ ವೇಳೆಗೆ ಪ್ರಾರಂಭ. ಪರಮಪೂಜ್ಯರ ದಿವ್ಯ ಅಧ್ಯಕ್ಷತೆ.

ಅನ್ಯಾಯ ಹೆಚ್ಚಾದಾಗ, ಅಧರ್ಮ ಮೇಲಾದಾಗ ಕ್ಷಾಮ ಡಾಮರಗಳು ಉಂಟಾಗುತ್ತವೆ. ಜನರ ಸನ್ಮಾರ್ಗವೇ ಬದುಕಿನ ಸಮೃದ್ಧಿಗೆ ಕಾರಣ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಅನ್ಯರಿಗೆ ಅಸಹ್ಯ ಪಡಬೇಡ'–ಎಂಬ ಬಸವಣ್ಣನವರು ಬೋಧಿಸಿದ ಸಪ್ತ ಸೂತ್ರಗಳು ಸಮಾಜದ ಚಾರಿತ್ರ್ಯ ನಿರ್ಮಾಣ ಮಾಡುವ ದಿವ್ಯ ಸಾಧನಗಳು. ಅವುಗಳ ಆಚರಣೆಯಿಂದ ಬದುಕು ಶುದ್ಧವಾಗುತ್ತದೆ ಎಂದು ಮಾತನಾಡಿದ ರಾಜ್ಯದ ಬಂದೀಖಾನೆಗಳ ಸಚಿವರಾದ ಸಾಗರನಹಳ್ಳಿ ಶ್ರೀ ರೇವಣ್ಣನವರು––ಇಡೀ ಕರ್ನಾಟಕದ ಉದ್ದಗಲದಲ್ಲಿ ಸಿದ್ಧಗಂಗೆಯ ಆಶ್ರಯ ಪಡೆದು ಮುಂದೆ ಬಂದ ವಿದ್ಯಾರ್ಥಿಗಳಿದ್ದಾರೆ ಎಂದು ನುಡಿದರು.

ತುಮಕೂರು ಜಿಲ್ಲೆ ಸಾಮಾಜಿಕ ಅರಣ್ಯಾಧಿಕಾರಿಗಳಾದ ಶ್ರೀ ಸಾಗರಾಜ್. ಹಂಪೋಳ್‌ರವರು — ಬಸವಣ್ಣನವರಂಥ ಆದರ್ಶ ವ್ಯಕ್ತಿಗಳಿಂದ ಕನ್ನಡನಾಡಿಗೆ ಬೆಲೆ ಬಂದಿದೆ—ಎಂದರು.

ದೇದೀಪ್ಯ ಬೆಳಕು ಬಸವಣ್ಣ. 1985ರ ವರ್ಷದ ಪ್ರಥಮ ಜಯಂತಿ ಆಚರಣೆಯ ಭಾಗ್ಯ ಎಸ್.ರಾಮಪುರದ್ದು. ಕನ್ನಡನಾಡು ವಿಶ್ವಕ್ಕೆ ಅರ್ಪಿಸಿದ ಅಮೂಲ್ಯ ಕಾಣಿಕೆ ಬಸವಣ್ಣ. ಜನ್ಮ ಶ್ರೇಷ್ಠತೆಗಿಂತ ಆಚಾರ ಶ್ರೇಷ್ಠತೆ ಮುಖ್ಯ. ಬಸವಣ್ಣನವರು ಕುಶಲ ಸಂಘಟಕರು. ವ್ಯಕ್ತಿ ಬದುಕಿನಲ್ಲಿ ದುರ್ವ್ಯವಹಾರಗಳ ಬಗ್ಗೆ ಹಿಂಜರಿಕೆ ಬೆಳೆಸಿಕೊಳ್ಳುವುದು ಸೂಕ್ತ. ಬಸವಣ್ಣನವರ ವಚನಗಳಲ್ಲಿ ಆತ್ಮನಿವೇದನೆಯಿದೆ. ಪ್ರೀತಿಯಿಂದ ಸಮಾಜವನ್ನು ಬಾಚಿ ತಬ್ಬಿದ ಬಸವಣ್ಣ. ಆತನ ಪ್ರೀತಿ ಗಣತಕ್ಕಳವಡದು, ಆತನ ಭಕ್ತಿಗೆ ಸೀಮೆಸಾಲದು, ಕುಲಸೀಮೆಗಳನ್ನು ಮೀರಿ ಬೆಳೆದ ನಿಸ್ಸೀಮ ಕುಲ ಚೆಲುವ ಬಸವಣ್ಣ. ಸ್ತ್ರೀವಿಮೋಚನೆಯ ಯುಗದ ಮೊದಲ ಹರಿಕಾರ–ಎಂದರು. ಶ್ರೀ ಬಿ. ವೀರಭದ್ರಯ್ಯನವರು.

Man is not an animal. But animal is more cultured than man. ಇಂದಿನ ಆಧುನಿಕ ಮಾನವನ ವ್ಯವಹಾರಗಳನ್ನು ಗಮನಿಸಿದರೆ ಮೇಲಿನ ಮಾತಿನ ಸತ್ಯ ಹೊಳೆದೀತು. ಪ್ರಾಣಿಗಿಂತ ಅಸಭ್ಯವಾಗಿ ಅಸಂಸ್ಕೃತವಾಗಿ ವ್ಯಕ್ತಿ ಇಂದು ವ್ಯವಹರಿಸುತ್ತಿದ್ದಾನೆ.

ಸ್ವಾತಂತ್ರ್ಯ ಎಂಬ ಶಬ್ದವನ್ನು ಬಸವಣ್ಣ ಬಳಸಲಿಲ್ಲ. ಆದರೆ ಅವನ ವಚನಗಳಲ್ಲಿ ಸ್ವಾತಂತ್ರ್ಯದ ಅಭೀಪ್ಸೆ ಅಭಿವ್ಯಕ್ತವಾಗಿರುವುದು ಸ್ಪಷ್ಟವಾಗಿದೆ. ಸ್ವಾತಂತ್ರ್ಯವನ್ನು ರಕ್ತಕ್ಕಿಂತ ಹೆಚ್ಚು ಪ್ರೀತಿಸಬೇಕು ಎಂಬ ವೈಚಾರಿಕತೆ ಅಣ್ಣನದು. ಬಸವಣ್ಣ ತುಂಬಾ ವೈಚಾರಿಕ ಮನೋಧರ್ಮ. ಅವನ ವಿಜ್ಞಾನ ಬಾಹ್ಯ ಜಗತ್ತಿನೊಂದಿಗಲ್ಲ, ಆತ್ಮ ಜಗತ್ತಿನೊಂದಿಗೆ.

Anatomy of soul is science ಎಂದಾತ ನಂಬಿದ್ದ. ಆತ ಆನಂದವನ್ನು ಕಾಣದ ಕೈಲಾಸದಲ್ಲಿ ಹುಡುಕಲಿಲ್ಲ. ದೀನ ದಲಿತರಲ್ಲಿ, ಅವರ ಉದ್ಧಾರದಲ್ಲಿ ಹುಡುಕಿದ. ಮನುಷ್ಯ ಗಜಜ್ಞಾನ, ಶ್ವಾನಜ್ಞಾನ, ಕುಕ್ಕುಟಜ್ಞಾನಗಳಿಗಿಂತ ಆತ್ಮಜ್ಞಾನವರಿಯುವುದು ಪರಮ ಶ್ರೇಷ್ಠ. "ತನ್ನನರಿಯದ ಜ್ಞಾನ ಅಜ್ಞಾನ ನೋಡಾ" ಎಂದಿದ್ದಾನೆ ಬಸವಣ್ಣ. ಭಗವಂತನ ಟಂಕಸಾಲೆ ಮಾನವಲೋಕವೆಂದು ನಂಬಿ ಆಚರಿಸಿದ ವಿಚಾರಶೀಲ ಬಸವಣ್ಣ. 12ನೇ ಶತಮಾನಕ್ಕಿಂತ 20 ನೇ ಶತಮಾನಕ್ಕೆ ಬಸವಣ್ಣ ಹೆಚ್ಚು ಪ್ರಸ್ತುತನಾಗುತ್ತಾನೆ. "Open Society" ನಿರ್ಮಾಣ ಮಾಡಿದ ಪ್ರಥಮಶಿಲ್ಪಿ ಆತ. ವೈಚಾರಿಕತೆಯ ಕನ್ನೆನೆಲ ಬಡತನ. ಭರತಖಂಡದಲ್ಲಿ ವಿಚಾರಮಾಡುವ 'ತಲೆ'ಗಳಿವೆ; ಆದರೆ ಆಚರಣೆಗೆ ತರುವಾಗ ಬಂಜೆಯಾಗುತ್ತಿವೆ — ಎಂದು ಉಪನ್ಯಾಸ ನೀಡಿದರು ರಾಣಿಬೆನ್ನೂರಿನ ಶ್ರೀ ವಿ. ವಿ. ಸಂಗಮದ ಅವರು.

ಕೆಳಗೆ ಬಿದ್ದವರನ್ನು ಮೇಲೆತ್ತಿದ ಹೃದಯವಂತ, ಸಮಾಜದ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸಿದ ಧೀರ ಧೀಮಂತ ವ್ಯಕ್ತಿ ಬಸವಣ್ಣ, ಮೃದುನುಡಿಯ, ಸದುನಡೆಯ ಪುಣ್ಯಮೂರ್ತಿ ಆತನೆಂದವರು ಸಿದ್ಧಗಂಗಾ ಸಂಜೆ ಕಾಲೇಜಿನ ಉಪನ್ಯಾಸಕರಾದ ಶ್ರೀ ಎಸ್. ಎಂ. ಭಾಸ್ಕರಾಚಾರ್‌ರವರು.

ಪಂಡಿತರು ಬರೆದಿದ್ದೇ ಸಾಹಿತ್ಯವಲ್ಲ, ಹೇಳಿದ್ದು ವೇದವಾಕ್ಯವಲ್ಲ. ಅವರಿಗೆ ಮಾತ್ರವೇ ಬಸವಣ್ಣನವರಂಥ ಮಹಾಪುರುಷರು ಅರ್ಥವಾಗುತ್ತಾರೆಂದಲ್ಲ. ಹಳ್ಳಿಗಾಡಿನ ಮುಗ್ಧ ಹೆಣ್ಣುಮಕ್ಕಳ ಶುದ್ಧ ಅಂತಃಕರಣದಲ್ಲೂ ಬಸವಣ್ಣ ನೆಲೆನಿಂತಿದ್ದಾನೆ. ಎದೆಯೊಳಗೆ ಕುಂತು ನುಡಿಸಿದ್ದಾನೆ. ಅವನು ಮಾಡಿದ ಸುಧಾರಣೆ ನೈಜವಾದುದು. ಅಂತ್ಯೋದಯದ ಅಂಕುರ ಅವನಿಂದಾಯಿತು. ಅದಕ್ಕೆ ನಿದರ್ಶನಗಳಾಗಿ ನಿನದಿಸುತ್ತಿವೆ, ಜನಪದ ಮುಕ್ತಕಗಳು. ಬಸವಣ್ಣನ ಅಭಿಮಾನವನ್ನು ಬೇಡಿದವಳು ಕನ್ನಡ ನಾಡಿನ ಗರತಿ. ಬಸವಣ್ಣನಂಥ ಮಗನನ್ನು ಹಡೆಯಲು ಹಂಬಲಿಸಿದವಳು ಅವಳು,

ಆಚಾರಕ್ಕೆ ಅರಸಾಗಿ ಬಾಳು, ನೀತಿಗೆ, ಪ್ರಭುವಾಗು, ಮಾತಿನಲಿ ಚೂಡಾಮಣಿಯಾಗು, ಜ್ಯೋತಿಯೇ ಆಗು ಜಗಕ್ಕೆ ಎಂದು ಎದೆತುಂಬಿ ಹಾರೈಸಿದ್ದಾಳೆ. ಇದೆಲ್ಲ ಬಸವಣ್ಣ ಮಾಡಿದ ಸುಧಾರಣೆಯ ಫಲವಲ್ಲವೇ? – ಎಂದರು ಶ್ರೀ ಹೆಚ್. ವಿ. ವೀರಭದ್ರಯ್ಯ.

ಸಮಾರಂಭದಲ್ಲಿ ತುಮಕೂರು ಸರ್ಕಾರಿ ಕಲಾ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಶ್ರೀನಿವಾಸಯ್ಯನವರು ಮಾತನಾಡಿದರು. ಸಂಸ್ಕೃತಾಧ್ಯಾಪಕರಾದ ಶ್ರೀ ಮಹದೇವಯ್ಯನವರೂ ಮಾತನಾಡಿದರು.

ಜೀವನ ತತ್ವಗಳನ್ನು ಅರ್ಥಮಾಡಿಕೊಳ್ಳುವುದೇ ಬಸವಜಯಂತಿಯ ಉದ್ದೇಶ. ಇಪ್ಪತ್ತನೇ ಶತಮಾನದಲ್ಲಿ ಬಸವ ತತ್ವಗಳ ಅಗತ್ಯವಿದೆ. ಅವುಗಳ ತೀವ್ರ ಪ್ರಚಾರವಾಗಬೇಕು. ಬಸವಣ್ಣ ಎಲ್ಲ ಕಾಲಕ್ಕೂ, ಎಲ ಜನಾಂಗಕ್ಕೂ ಬೇಕಾದ ಮಹಾನುಭಾವಿ. ಮಾನವ ಕುಲದ ಉದ್ಧಾರಕ; ಕಾಯಕ ಚಳುವಳಿಯನ್ನು ಪ್ರಾರಂಭಿಸಿದ ಪ್ರಥಮ ಹೋರಾಟಗಾರ. ದೀನ ದಲಿತರನ್ನು ತನ್ನ ತಂದೆ, ಬಂಧು, ಜೊಪ್ಪನೆಂದ ಅನುಪಮ ವ್ಯಕ್ತಿ. ಅವರ ಉದ್ಧಾರಕ್ಕೆ ಜೀವನವನ್ನೇ ಮೀಸಲಿಟ್ಟು ದುಡಿದ ದ್ರಷ್ಟಾರ. "ಎಲವೋ ಎಲವೋ ಪಾಪಕರ್ಮವ ಮಾಡಿದವನೆ ಒಮ್ಮೆ ಶರಣೆನ್ನೆಲವೋ" - ಎಂದು ಮಾರ್ಗದರ್ಶನ ಮಾಡಿದ ಮಹಾ ದಾರ್ಶನಿಕ. ಹರಿಜನರಿಂದು ಚಿಂತನ ಮಂಥನ ಮಾಡಬೇಕು. ವಿಚಾರ ವಿಮರ್ಶೆ ಅವರದಾಗಬೇಕು. ಸ್ವಶಕ್ತಿ ಉದಯವಾಗದ ಹೊರತು ಅವರ ಏಳ್ಗೆಯಾಗದು. ವೀರಶೈವ ಧರ್ಮ, ಸಂಸ್ಕೃತಿ ಉದಾತ್ತವಾದುದು. ಮಹೋನ್ನತವಾದುದು. ಹರಿಜನನೊಬ್ಬನನ್ನು ಮಠಾಧ್ಯಕ್ಷನನ್ನಾಗಿ ಮಾಡಿ ಗೌರವಿಸಿದ ಏಕೈಕ ಧರ್ಮ ವೀರಶೈವ. ಉರಿಲಿಂಗಪೆದ್ದಿಯ ಜ್ವಲಂತ ನಿದರ್ಶನ ಕಣ್ಣೆದುರಿಗಿದೆ. ಧರ್ಮಾನುಯಾಯಿಗಳು ತಮ್ಮ ಧರ್ಮದ ಬಗ್ಗೆ ಸ್ಪಷ್ಟ ತಿಳುವಳಿಕೆ ಪಡೆದು ನಡೆಯಬೇಕು. ಆಗಲೇ ಉದ್ಧಾರ, ಆಗಲೇ ಬೆಳಕು - ಎಂದು ಪರಮ ಪೂಜ್ಯ ಶ್ರೀ ಶ್ರೀ ಗಳವರು ಅಧ್ಯಕ್ಷ ಪೀಠದಿಂದ ಅನುಗ್ರಹಾಶೀರ್ವಾದ ಮಾಡಿದರು.

ರಾತ್ರಿ ಹತ್ತು ಘಂಟೆಯಿಂದ 'ಜಗಜ್ಯೋತಿ ಬಸವೇಶ್ವರ' ನಾಟಕ 128ನೆಯ ಪ್ರಯೋಗ ಪ್ರದರ್ಶಿತವಾಯಿತು. ಬೆಳಗಿನ ಕೋಳಿ ಕೂಗಿದರೂ ನಾಟಕ ಮುಗಿದಿರಲಿಲ್ಲ. ವಿಪರೀತ ಚಳಿಯಿತ್ತು. ಆದರೂ ಜನ ಕಂಬಳಿ, ಹಚ್ಚಡ ಹೊದ್ದು ನೋಡಿದರು ನಾಟಕವನ್ನು. ಸ್ವಾಮಿಗಳ ಸೇವೆಯನ್ನು ಕೊಂಡಾಡದ ಜನವಿಲ್ಲ-

(38ನೇ ಪುಟ ನೋಡಿ)

# ವಿವಿಧ ಸಮಾರಂಭಗಳಲ್ಲಿ ಶ್ರೀ ಶ್ರೀಗಳು

ಪರಮ ಪೂಜ್ಯ ಶ್ರೀ ಶ್ರೀ ಗೌರಿಶಂಕರ ಸ್ವಾಮಿಗಳವರು 6-1-85 ರಂದು ತುಮಕೂರಿನ ಸಾವಿತ್ರಮ್ಮ ಕಲ್ಯಾಣ ಮಂಟಪದಲ್ಲಿ ಆಚಾರ್ಯ ಕಲಾಭವನ ವಿದ್ಯಾರ್ಥಿಗಳ ಚಿತ್ರಕಲಾ ಪ್ರದರ್ಶನ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ ಸಂದರ್ಭದಲ್ಲಿ "ಕಲೆಯಿಂದ ಆತ್ಮ ವಿಕಾಸವನ್ನು, ಮನೋಲ್ಲಾಸವನ್ನು, ರಸಾನುಭೂಮಿಯನ್ನು ಪಡೆಯಬಹುದು. ಅಲ್ಲದೆ ಎಲ್ಲ ಕಲೆಗಳಿಗಿಂತ ಮಾನವ ಮಾನವನಾಗಿ ಉಳಿಯುವ ಕಲೆ ದೊಡ್ಡದು"- ಎಂದು ಆಶೀರ್ವಚನ ಮಾಡಿದರು. ಇದೇ ಸಂದರ್ಭದಲ್ಲಿ ನಾಡಿನ ಹೆಸರಾಂತ ಚಿತ್ರ ಕಲಾವಿದರಾದ ಶ್ರೀ ಎಂ. ಟಿ. ವಿ. ಆಚಾರ್ಯರನ್ನು ಸನ್ಮಾನಿಸಲಾಯಿತು.

8-1-85 ರಂದು ನಂಜನಗೂಡು ತಾಲ್ಲೂಕು ಮಲ್ಲನಮೂಲೆ ಮಠದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಹತ್ತನೆಯ ಪುಣ್ಯಾರಾಧನೆಯ ಸಂದರ್ಭದಲ್ಲಿ ಸಮಾವೇಶಗೊಂಡಿದ್ದ ಬೃಹತ್ ಸಭೆಯಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತ "ಶರಣರು ತತ್ವಜ್ಞಾನಿಗಳಾಗಿದ್ದರು, ದಾರ್ಶನಿಕರಾಗಿದ್ದರು, ಆಚರಣೆಯಲ್ಲಿ ಬರುವಂತಹ ತತ್ವಗಳನ್ನು ಬಿತ್ತಿದರು. ನೈತಿಕ ಸಂಪತ್ತನ್ನು ಬಿತ್ತಿ ಬೆಳೆದರು. ಕೈಗೊಂಡ ವೃತ್ತಿಗೆ ಪಾವಿತ್ರ್ಯತೆಯನ್ನು ತಂದುಕೊಟ್ಟರು. ಕಾಯಕವಿಲ್ಲದೆ ಬದುಕುವುದನ್ನು ಕಟುವಾಗಿ ವಿರೋಧಿಸಿದರು" ಎಂದು ನುಡಿದರು.

14-1-85 ರಂದು ತುಮಕೂರು ವೀರಶೈವ ಸಮಾಜದ ವತಿಯಿಂದ ಸಿದ್ಧಿ ವಿನಾಯಕ ಮಂಟಪದಲ್ಲಿ ನಡೆದ ಶ್ರೀ ಸಿದ್ಧರಾಮ ಜಯಂತಿಯ ಅಧ್ಯಕ್ಷತೆಯನ್ನು ವಹಿಸಿದ್ದರು.

15-1-85 ರಂದು ತುರುವೇಕೆರೆಯಲ್ಲಿ ಜರುಗಿದ ಶಿವಯೋಗಿ ಸಿದ್ಧರಾಮರ 812ನೇ ಜಯಂತಿ ಸಮಾರಂಭದ ಸಮಾರೋಪ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ, "ಇಂದಿನ ಜೀವನದ ಎಲ್ಲ ಸಂಕಷ್ಟಗಳಿಗೆ, ಸಂಕ್ಷೋಭೆಗಳಿಗೆ ಶರಣರ ತತ್ವಾನುಸರಣೆಯೊಂದೇ ಏಕೈಕ ಪರಿಹಾರ, ಒಳಪಂಗಡಗಳ ಅನಾರೋಗ್ಯಕರ ಮನೋಭಾವ ಬೆಳೆಸುವುದರ ಬದಲು, ಸಮಾಜದ ಪುರೋಭಿವೃದ್ಧಿಗೆ ಸಹಾಯಕವಾಗುವಂಥ ಸಂಘಟನೆ ಮಾಡಬೇಕಾದುದು ಮುಖ್ಯ" ಎಂಬುದಾಗಿ ಆಶೀರ್ವಚನ ನೀಡಿದರು. ●

---

(37ನೇ ಪುಟದಿಂದ)

"ಸದಾನಂದ ಶ್ರಮವಾದರೂ ಒಳ್ಳೆಯ ಕೆಲಸ ಮಾಡಿದ" ಎಂದೊಬ್ಬರು ಹೇಳುತ್ತಿದ್ದಾಗ ಇನ್ನೊಬ್ಬ ಹೆಣ್ಣುಮಗಳು ಸ್ವಾಮಿಗಳ ಮಹಿಮೆ, "ಇದೆಲ್ಲ ನಡಿತೈತೆ" ಎನ್ನುತ್ತಿದ್ದಳು. ●

# ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಸಂಘ

—ಹೆಚ್. ಬಿ. ಗಂಗಾಧರಯ್ಯ

ಶ್ರೀ ಸಿದ್ಧಗಂಗಾ ಮಠವು ಅನ್ನ, ವಿದ್ಯೆ ಮತ್ತು ಜ್ಞಾನ ಪ್ರಸಾರಕ್ಕೆ ತ್ರಿವೇಣಿ ಸಂಗಮವಾಗಿದೆ. ಶ್ರೀ ಮಠದ ಭಕ್ತರು ಮತ್ತು ಅಭಿಮಾನಿಗಳು ಲಕ್ಷೋಪ ಮಂದಿ ರಾಜ್ಯದಾದ್ಯಂತ ಇದ್ದಾರೆ. ಇಷ್ಟು ಮಾತ್ರವಲ್ಲದೆ ನೆರೆಯ ರಾಜ್ಯಗಳಾದ ಆಂಧ್ರ ಪ್ರದೇಶ ಮತ್ತು ತಮಿಳುನಾಡುಗಳಲ್ಲಿಯೂ ಇದ್ದಾರೆ. ವಿದ್ಯಾಭ್ಯಾಸಕ್ಕಾಗಿ ವಿದ್ಯಾರ್ಥಿಗಳು ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಧಾವಿಸಿ ಬರುತ್ತಿದ್ದಾರೆ ಈಗ ಸುಮಾರು 4200 ಮಂದಿ ವಿದ್ಯಾರ್ಥಿಗಳು ಪ್ರಾಥಮಿಕ ಹಂತದಿಂದ ವಿಶ್ವವಿದ್ಯಾನಿಲಯದವರೆಗೆ ವ್ಯಾಸಂಗ ಮಾಡುತ್ತಿದ್ದಾರೆ. ಸಿದ್ಧಗಂಗಾ ಒಂದು ಬೃಹತ್ ವಿದ್ಯಾ ಕೇಂದ್ರವಾಗಿದೆ. ಪ್ರತಿವರ್ಷ ಸಹಸ್ರ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಪೂರೈಸಿಕೊಂಡು ಹೋಗುತ್ತಾರೆ. ಇಲ್ಲಿರುವ ಉಚಿತ ವಿದ್ಯಾರ್ಥಿ ನಿಲಯ ಸ್ಥಾಪನೆಯಾಗಿ 65 ವರ್ಷಗಳಾದುವು. ಈ ಅವಧಿಯಲ್ಲಿ ಶ್ರೀ ಮಠದಲ್ಲಿ ವ್ಯಾಸಂಗ ಮಾಡಿ ಹೋಗಿರುವ ವಿದ್ಯಾರ್ಥಿಗಳು ಲಕ್ಷೋಪಲಕ್ಷ ಸಂಖ್ಯೆಯಲ್ಲಿದ್ದಾರೆ. ಇವರೆಲ್ಲರೂ ಸಮಾಜದಲ್ಲಿ ನಾಗರೀಕ ವ್ಯಕ್ತಿಗಳಾಗಿ ಉತ್ತಮ ಜೀವನವನ್ನು ಸಾಗಿಸುತ್ತಿದ್ದಾರೆ. ಈ ಮೂಲಕ ರಾಷ್ಟ್ರದ ಶ್ರೇಯೋಭಿವೃದ್ಧಿಗಾಗಿ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ. ಇವರೆಲ್ಲರ ಜೀವ ಜ್ಯೋತಿಯನ್ನು ಹತ್ತಿಸಿ ಬೆಳಗುತ್ತಿರುವವರು ಶ್ರೀ ಮಠಾಧ್ಯಕ್ಷರಾದ ತ್ರಿವಿಧ ದಾಸೋಹ ಮೂರ್ತಿ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು, ಎಲ್ಲರಿಗೂ ಮಂಗಳ ಕೋರುತ್ತಿರುವ ನಿರಂತರವಾಗಿ ಕಾಯಕವೇ ಕೈಲಾಸ ಎಂಬುದನ್ನು ಕೃತಿಯಲ್ಲಿ ತೋರಿಸುತ್ತಿರುವ ಮಹಾನುಭಾವರಾದ ಪುಣ್ಯ ಮೂರ್ತಿ ಅವರು. ಶ್ರೀ ಶ್ರೀಗಳವರು ನಡೆಸಿಕೊಂಡು ಬರುತ್ತಿರುವ ಅದ್ಭುತವಾದ ಮಹಾ ಕಾರ್ಯಗಳಿಗೆ ರಾಜ್ಯದ ಎಲ್ಲಾ ಕೋಮುಗಳಿಗೂ ಸೇರಿದ ಜನತೆ ನೆರವನ್ನು ನೀಡಿ ತುಂಬು ಹೃದಯದ ಸಹಕಾರ ನೀಡುತ್ತಿದೆ, ಇದೇ ಶ್ರೀ ಮಠಕ್ಕೆ ರಕ್ಷೆಯಾಗಿದೆ.

ನಮ್ಮ ಭಾರತೀಯ ಧರ್ಮಕ್ಕೆ ಅನುಸಾರವಾಗಿ ಮಾನವನಾಗಿ ಹುಟ್ಟಿದ ಮೇಲೆ ಮಾತೃಋಣ, ಪಿತೃಋಣ ಮತ್ತು ಗುರುಋಣದಿಂದ ವಿಮುಕ್ತನಾಗಲೇಬೇಕು. ಇದನ್ನರಿತ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಆಶ್ರಯನೀಡಿ ಸಲಹಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದ ಶ್ರೀ ಶ್ರೀಗಳವರಿಗೆ ಅವರ ಬಹುಮುಖ ಕಾರ್ಯಗಳಲ್ಲಿ ನೆರವಾಗಬೇಕೆಂಬ ಹಂಬಲ ತೋರಿದರು. ಇದರ ಫಲವಾಗಿ 1954ನೇ ವರ್ಷದಲ್ಲಿ ಶ್ರೀ ಮಠದಲ್ಲಿ ಹಳೆಯ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಲಾಯಿತು. (Old Boys

Association) ಪ್ರತಿಭಾನ್ವಿತ ಹಳೆಯ ವಿದ್ಯಾರ್ಥಿಗಳ ಸಂಘವು ಮಾಡಬೇಕಾದ ಕೆಲಸ ಕಾರ್ಯಗಳ ಬಗೆಗೆ ಯೋಜನೆಗಳನ್ನು ರೂಪಿಸಿದರು. ಅಂದಿನಿಂದ ಇಂದಿನವರೆಗೆ ರಚನಾತ್ಮಕ ಕಾರ್ಯಗಳನ್ನು ನಿರ್ವಹಿಸುತ್ತಿದೆ. ಈ ಮೂಲಕ ಶ್ರೀ ಮಠದ ಸೇವಾ ಕಾರ್ಯಗಳಲ್ಲಿ ತನ್ನ ಶಕ್ತಿ ಮೀರಿ ಶ್ರಮಿಸುತ್ತಿದೆ.

## ಸಂಘದ ಮುಖ್ಯವಾದ ಕಾರ್ಯ ಚಟುವಟಿಕೆಗಳು

### ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ

ಇದು ಜ್ಞಾನ ಪ್ರಸಾರದ ಮಾಧ್ಯಮವಾಗಿದೆ, ಮಹಾ ಶಿವರಾತ್ರಿಯ ಜಾತ್ರಾ ಸಂದರ್ಭದಲ್ಲಿ ಲಕ್ಷೋಪಲಕ್ಷ ಮಂದಿ ಭೇಟಿ ಕೊಡುತ್ತಾರೆ. ರಾಜ್ಯದ ಮತ್ತು ಕೇಂದ್ರದ ಇಲಾಖೆಗಳು ಭಾಗವಹಿಸುತ್ತವೆ. ರಾಜ್ಯ ಮಟ್ಟದಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ನಡೆಯುವ ಏಕೈಕ ವಸ್ತು ಪ್ರದರ್ಶನ. ಇದರ ಪ್ರಯೋಜನ ಎಲ್ಲಾ ಗ್ರಾಮೀಣ ಬಂಧುಗಳಿಗೆ ಮತ್ತು ಕೈಗಾರಿಕೋದ್ಯಮಿಗಳಿಗೆ ಇದರ ನಿರ್ವಹಣೆ ಮತ್ತು ವಿನ್ಯಾಸವೆಲ್ಲವನ್ನೂ ಹಳೆಯ ವಿದ್ಯಾರ್ಥಿಗಳೇ ಮಾಡುತ್ತಿದ್ದಾರೆ. ಇದು ಸಂಘದ ಒಂದು ಮಹತ್ತರ ಸೇವೆ. ಇದರ ಪ್ರಾರಂಭವಾದುದು 1964ನೇ ವರ್ಷದಲ್ಲಿ.

### ಸಿದ್ಧಗಂಗಾ ಮಾಸ ಪತ್ರಿಕೆ

ಇದು ಸಂಘದ ಹೆಮ್ಮೆಯ ಪ್ರಕಟಣೆ. ಒಂದು ದಶಕ ತ್ರೈಮಾಸಿಕವಾಗಿ ಪ್ರಕಟಗೊಂಡು ಎರಡನೆಯ ದಶಕದಲ್ಲಿ ಮಾಸಿಕವಾಗಿ ಪರಿವರ್ತನೆಗೊಂಡು ಐದು ಸಾವಿರ ಪ್ರತಿಗಳ ಪ್ರಸಾರ ಹೊಂದಿದೆ. ಇದು ಧರ್ಮ, ಆಧ್ಯಾತ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಮೀಸಲಾದ ಪತ್ರಿಕೆ. ಇದರ ಪ್ರಸಾರ ಮತ್ತು ಮುದ್ರಣ ಹಾಗೂ ನಿರ್ವಹಣೆ ಕಾರ್ಯವನ್ನು ಸಂಘವು ಹೊತ್ತಿದೆ. ಧರ್ಮ ಮತ್ತು ಜ್ಞಾನ ಪ್ರಸಾರಕ್ಕೆ ಉತ್ತಮ ಮಾಧ್ಯಮವಾಗಿದೆ. ಹೆಸರಾಂತ ಪತ್ರಿಕೆಯಾಗಿ ರಾಜ್ಯದಾದ್ಯಂತ ಮೆಚ್ಚುಗೆ ಪಡೆದಿದೆ, ಇದರ ಪ್ರಥಮ ಸಂಚಿಕೆಯು ಹೊರಬಂದದ್ದು 1965ನೇ ಜನವರಿ ಪುಣ್ಯ ಸಂಕ್ರಮಣದಂದು.

### ಸಂಘವು ಶ್ರೀ ಶ್ರೀಗಳವರ ರಜತ ಮಹೋತ್ಸವ ಮತ್ತು ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಸಲ್ಲಿಸಿದ ಸೇವೆ ಅಪಾರ ಮತ್ತು ಚಿರಸ್ಮರಣೀಯ

ಪ್ರತಿ ವರ್ಷ ಜಾತ್ರಾ ಸಂದರ್ಭದಲ್ಲಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಆಗಮಿಸಿ ಕೊಪ್ಪಲುಗಳಲ್ಲಿ ಪ್ರಸಾದ ನೀಡುವ ಮತ್ತು ವಸ್ತು ಪ್ರದರ್ಶನದ ಮೇಲ್ವಿಚಾರಣಾ ಕಾರ್ಯಗಳಲ್ಲಿ ಭಾಗಿಗಳಾಗಿ ತಮ್ಮ ಕೈಲಾದ ಸೇವೆ ಸಲ್ಲಿಸುತ್ತಿದ್ದಾರೆ.

ವಸ್ತು ಪ್ರದರ್ಶನ ಮತ್ತು ಸಿದ್ಧಗಂಗಾ ಮಾಸ ಪತ್ರಿಕೆ ನಮ್ಮ ಹಳೆಯ ವಿದ್ಯಾರ್ಥಿ ಸಂಘದ ಎರಡು ಕಣ್ಣುಗಳಂತೆ. ಶ್ರೀ ಮಠದ ಕಾರ್ಯಗಳ ಸಮಗ್ರ ಸಮೀಕ್ಷೆ ಮಾಡುತ್ತಿವೆ. ಈ ಮೂಲಕ ಶ್ರೀ ಮಠದ ಸೇವಾ ಕಿರಣಗಳು ಎಲ್ಲೆಡೆ ವ್ಯಾಪಿಸಿಕೊಂಡಿವೆ.

## ಸಂಘದ ರಜತ ಮಹೋತ್ಸವ

ಸುಮಾರು 30 ವರ್ಷಗಳ ಕಾಲ ಹಳೆಯ ವಿದ್ಯಾರ್ಥಿ ಸಂಘವು ಶ್ರೀ ಮಠದ ಸರ್ವೋತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದೆ. ಇದರ ಸವಿ ನೆನಪಿಗಾಗಿ ಸಂಘದ ರಜತ ಮಹೋತ್ಸವವನ್ನು ಆಚರಿಸಬೇಕೆಂದು ತೀರ್ಮಾನಿಸಲಾಗಿದೆ. ಈ ಬಗ್ಗೆ 13–1–85ನೇ ಭಾನುವಾರ ಸಮಾವೇಶಗೊಂಡಿದ್ದ ಹಳೆಯ ವಿದ್ಯಾರ್ಥಿ ಸಂಘದ ಸರ್ವ ಸದಸ್ಯರ ಸಭೆಯಲ್ಲಿ ತೀರ್ಮಾನ ಕೈಗೊಳ್ಳಲಾಯಿತು. ಸುಮಾರು ಒಂದು ಸಾವಿರ ಹಳೆಯ ವಿದ್ಯಾರ್ಥಿಗಳು ಈ ಸಭೆಯಲ್ಲಿ ಭಾಗವಹಿಸಿದ್ದರು. ಸಂಘದ ಅಧ್ಯಕ್ಷರಾದ ಪರಮ ಪೂಜ್ಯ ಶ್ರೀ ಶ್ರೀಗಳು ರಜತ ಮಹೋತ್ಸವ ಆಚರಿಸಲು ತಮ್ಮ ಸಮ್ಮತಿಯನ್ನು ಕೊಟ್ಟರು. ಇದು ನಮ್ಮ ಸಂಘದ ಲಕ್ಷೋಪಲಕ್ಷ ಮಂದಿ ಹಳೆಯ ವಿದ್ಯಾರ್ಥಿಗಳಿಗೆಲ್ಲಾ ಸಂತೋಷವಾದ ಸಂಗತಿ.

ಸಂಘ ಶಕ್ತಿ ದೊಡ್ಡದು–ಪರಸ್ಪರ ಸಹಕಾರದಿಂದ ದೊಡ್ಡ ಕಾರ್ಯಗಳನ್ನು ಸಾಧಿಸಬಹುದು. ಕೃತಜ್ಞತೆ ಮತ್ತು ಸಮರ್ಪಣಾಭಾವದಿಂದ ನಾವೆಲ್ಲರೂ ಶ್ರೀ ಮಠದ ಸೇವಾ ಕಾರ್ಯಗಳಲ್ಲಿ ಭಾಗಿಗಳಾಗೋಣ. ಸಂಘದ ರಜತ ಮಹೋತ್ಸವ ವೈಭವಯುತವಾಗಿ ನೆರವೇರಲು ನಿಮ್ಮೆಲ್ಲರ ಸಹಕಾರ ಕೋರುತ್ತೇವೆ. ಈ ಬಗ್ಗೆ ವಿವರಗಳು ಮುಂದಿನ ಸಂಚಿಕೆಯಲ್ಲಿ ಪ್ರಕಟಗೊಳ್ಳುತ್ತವೆ.

---

ದಯವಿಟ್ಟು ಗಮನಿಸಿ

“ಮನಶ್ಶುದ್ಧಿಯೇ ಮಹಾ ಧರ್ಮ” 22ನೇ ಪುಟದಿಂದ ಮುಂದುವರಿದ ಲೇಖನ

ಅರ್ಚನೆ, ಪ್ರಾರ್ಥನೆ ಆಚಾರ ಮತ್ತು ಅನುಷ್ಠಾನಗಳು ಸೃಷ್ಟಿಸಲ್ಪಟ್ಟವು. ಹೃದಯ ಶುದ್ಧಿಗೆ ಗಮನ ನೀಯದೆ ಬರಿಯ ಬಾಹ್ಯ ಶುದ್ಧಿಗೂ ಮತ್ತು ಬಾಹ್ಯಾಚಾರಣೆಗಳಿಗೂ ಮಾನವ ಜನಾಂಗ ಪ್ರಾಧಾನ್ಯತೆ ಇತ್ತ ಕಾರಣಕ್ಕಾಗಿಯೇ ಅಂತಹ ಅಸಂಬದ್ಧ ಧೋರಣೆಯನ್ನು ಖಂಡಿಸಿ ಈ ಮೇಲೆ ವಿವರಿಸಿದ ಅಭಿಪ್ರಾಯವನ್ನು ಒತ್ತಿ ಹೇಳುವ ಆವಶ್ಯಕ ತಿರುಕ್ಕುರಳ್ ಎಂಬ ಜೀವನ ಸಿದ್ಧಾಂತ ಕೃತಿಯನ್ನು ರಚಿಸಿದ ತಿರುವಳ್ಳುವ ಮಹಾ ಮುನಿಗೆ ಒದಗಿ ಬಂತು.

# ಕ್ಷೇತ್ರವಾರ್ತೆ

—ಪಿ. ಎನ್. ಚಂದ್ರಶೇಖರಯ್ಯ

13-1-85ರಂದು ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಸರ್ವ ಸದಸ್ಯರ ಸಭೆ ಸಮಾವೇಶಗೊಂಡಿತ್ತು. ಹಳೆಯ ವಿದ್ಯಾರ್ಥಿಗಳಾಗಿದ್ದ ದಿವಂಗತರಾದ ಶ್ರೀ ಕೆ. ಎನ್. ಭೀಮಯ್ಯ ಮತ್ತು ಹೆಚ್. ರುದ್ರಯ್ಯ ಇವರುಗಳಿಗೆ ಶ್ರದ್ಧಾಂಜಲಿ ಯನ್ನರ್ಪಿಸಲಾಯಿತು.

ಸಂಘದ ಬೆಳ್ಳಿ ಹಬ್ಬದ ಆಚರಣೆಯ ಸಂಬಂಧವಾಗಿ ವಿವಿಧ ಉಪ ಸಮಿತಿಗಳನ್ನು ರೂಪಿಸಲಾಯಿತು. ಇದೇ ಸಂದರ್ಭದಲ್ಲಿ ರಾಷ್ಟ್ರ ಪ್ರಶಸ್ತಿ ವಿಜೇತರಾದ ಶ್ರೀ ಡಿ. ಜಯದೇವ್‌ರವರನ್ನು ಸನ್ಮಾನಿಸಲಾಯಿತು.

ಪರಮ ಪೂಜ್ಯ ಶ್ರೀ ಶ್ರೀಗಳವರ ತಪೋ ಜೀವನಕ್ಕೆ ಸಂಬಂಧಿಸಿದ "ಶ್ರೀ ದರ್ಶನ ಮಂಟಪ" ಪ್ರದರ್ಶನವನ್ನು ಶ್ರೀ ಶ್ರೀಗಳವರು ಉದ್ಘಾಟಿಸಿದರು.

9-1-85ರಂದು ಶ್ರೀ ಕ್ಷೇತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖಾವತಿಯಿಂದ ಸಂಸ್ಕೃತಿ ಸುದಿನ ಕಾರ್ಯಕ್ರಮವನ್ನು ಆಚರಿಸಲಾದ ಸಂದರ್ಭದಲ್ಲಿ "ನಾವೆಲ್ಲ ಒಂದೆ" ಎಂಬ ನಾಟಕವನ್ನು ಮತ್ತು ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

13-1-85ರ ಭಾನುವಾರ ಪ್ರಾತಃಕಾಲ 7-30ರಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಅಮೃತ ಹಸ್ತದಿಂದ ಶ್ರೀ ಕ್ಷೇತ್ರದ ಜಾತ್ರಾ ಸಂದರ್ಭದಲ್ಲಿ ನಡೆಸುವ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಗುದ್ದಲೀ ಪೂಜೆಯು ನೆರವೇರಲ್ಪಟ್ಟಿತು. ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ವತಿಯಿಂದ ನಡೆಯುವ ಈ ವಸ್ತು ಪ್ರದರ್ಶನದ ಪೂಜಾ ಸಂದರ್ಭದಲ್ಲಿ ಅನೇಕ ಹಳೆಯ ಮಿತ್ರರೂ ಭಾಗವಹಿಸಿದ್ದರು.

ದಿನಾಂಕ 17-1-85ರಂದು ಶ್ರೀ ಕ್ಷೇತ್ರದ ವಸ್ತು ಪ್ರದರ್ಶನದ ಆವರಣದಲ್ಲಿ ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆಯ ಆಶ್ರಯದಲ್ಲಿ ಸಮುದಾಯ ಸೇವಾ ಶಿಬಿರದ ಉದ್ಘಾಟನಾ ಸಮಾರಂಭವು ಪೂಜ್ಯ ಶ್ರೀ ಗೌರೀಶಂಕರ ಸ್ವಾಮಿಗಳವರ ಅಧ್ಯಕ್ಷತೆ ಯಲ್ಲಿ ಜರುಗಿತು. ಸಮಾರಂಭದ ಉದ್ಘಾಟನೆಯನ್ನು ಆಡಳಿತಾಧಿಕಾರಿಗಳಾದ ಶ್ರೀ ಜಿ. ನಂಜಪ್ಪನವರು ಮಾಡಿದರು. ಸಂಸ್ಥೆಯ ಪ್ರಾಚಾರ್ಯರಾದ ಹೆಚ್. ಬಿ. ಗಂಗಾ ಧರಯ್ಯನವರು ಶಿಬಿರದ ಮಹತ್ವವನ್ನು ಶಿಕ್ಷಣಾರ್ಥಿಗಳಿಗೆ ತಿಳಿಸಿದರು.

**ಶ್ರೀ ಶ್ರೀಗಳವರು ಹೇಳಿದ್ದು**

ಮೊದಲು ಬೆಳಗ್ಗೆ ಮೂರು ಘಂಟೆಗೆ ಏಳುತ್ತಿದ್ದೆ, ಆಮೇಲೆ ಎರಡೂವರೆ ಘಂಟೆಗೆ ಏಳಲು ಪ್ರಾರಂಭಿಸಿದೆ, ಇದೀಗ ಎರಡು ಘಂಟೆ ಇಪ್ಪತ್ತು ನಿಮಿಷಕ್ಕೆ ಏಳುತ್ತೇನೆ.

ತತ್ವ ಪ್ರಚಾರಕ್ಕೆ ನಾಟಕ ಮಾಧ್ಯಮ ತುಂಬ ಪರಿಣಾಮಕಾರಿಯಾದದ್ದು.

ಒಮ್ಮೆ ಮಠಕ್ಕೆ ಅರ್ಧ ರಾತ್ರಿ ಸಮಯದಲ್ಲಿ ಭಕ್ತರು ಬಂದರು. ಆಗ ನಮ್ಮ ಸ್ವಾಮಿಗಳು (ಉದ್ದಾನ ಶಿವಯೋಗಿಗಳು) ಇದ್ದರು. ಆ ವೇಳೆಯಲ್ಲಿ ಅವರು ಅಡಿಗೆಯವರಿಗೆ ತೊಂದರೆ ಕೊಡಲಿಲ್ಲ. ತಾವೇ ನಿಂತು ಪ್ರಸಾದ ಸಿದ್ಧಪಡಿಸಿ ಭಕ್ತಾದಿಗಳಿಗೆ ನೀಡಿದರು. ದಾಸೋಹದ ಗುಟ್ಟನ್ನು ಸ್ವಾಮಿಗಳಿಂದ ಕಲಿತೆ.

**ಶ್ರೀ ಶ್ರೀಗಳವರು ಹಾಗು ಶ್ರೀ ಕ್ಷೇತ್ರವನ್ನು ಕುರಿತು**

ದುಡಿದುಡಿದು ಹಣ್ಣಾಗಿ ಬಾಗಿ ಹೋಗಿದ್ದಾರೆ ಶ್ರೀ ಶ್ರೀಗಳವರು.

ಇದೇ ನಮ್ಮ ತಂದೆಯ ಮನೆ, ಇದೇ ನಮ್ಮ ತೌರುಮನೆ, ಇದೇ ದೇವಮಂದಿರ.

—ವಿದ್ವಾನ್ ಹೆಚ್. ಕೆ. ಸಿದ್ಧಗಂಗಯ್ಯ, ಹಳೆಯ ವಿದ್ಯಾರ್ಥಿ

ಇದು ಅವಿಮುಕ್ತ ಕ್ಷೇತ್ರ. ಅವಿಮುಕ್ತ ಎಂದರೆ ಬಿಡುಗಡೆ ಹೊಂದಿಲ್ಲದ ಎಂದು ಅರ್ಥ. ಶಿವಯೋಗಿಗಳ ತಪಸ್ಸಿನ ಮಂಗಳ ಪ್ರಭೆಯಿಂದ ಬಿಡುಗಡೆ ಹೊಂದಿಲ್ಲದ ಕ್ಷೇತ್ರ ಸಿದ್ಧಗಂಗಾ.

—ಪಂಡಿತ ಚೆನ್ನಪ್ಪ ಎರೇಸೀಮೆ, ಹಳೆಯ ವಿದ್ಯಾರ್ಥಿ.

# ಬಸವ ಪ್ರತಿಜ್ಞಾ

— ಟಿ. ಎಸ್. ಮಹದೇವಯ್ಯ

ಅರಿಯದೆ ಜನನಿಯ ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ,
ಹುಟ್ಟುತ್ತೆ ತಪ್ಪಾಯಿತ್ತೆ ಎಲೆ ಲಿಂಗವೇ,
ಮುನ್ನ ಹುಟ್ಟುದುದಕ್ಕೆ ಕೃಪೆಯ ಮಾಡು ಎಲೆ ಲಿಂಗವೇ,
ಇನ್ನು ಹುಟ್ಟಿಂದರೆ ಕೂಡಲ ಸಂಗಮದೇವ ನಿಮ್ಮಾಣೆ.

ಜೀವನು ದೇವನಾಗುವುದು ಅವನ ಗುರಿ. ಜಗತ್ತಿನಲ್ಲಿ ಕಣ್ಣಿಗೆ ಕಾಣಬಹುದಾದ ಮನಸ್ಸಿಗೆ ಸಿಲುಕಬಹುದಾದ ಸುಖಗಳೆಲ್ಲಾ ಬಲುಕಾಲ ನಿಲ್ಲಲಾರವು. ಜನ್ಮ ಜನ್ಮಗಳ ಮಾತು ಹಾಗಿರಲಿ, ಒಂದು ಜನ್ಮದಲ್ಲಾದರೂ ಶಾಶ್ವತ ಸುಖವನ್ನು ಕೊಡಲಾರವು. ಸುಖ ಸುಖ ಎನ್ನುತ್ತ ನಿತ್ಯವೂ ಮನುಷ್ಯನು ದುಃಖದಲ್ಲಿ ಸುಖವನ್ನು ಅರಸುತ್ತಾನೆ. ಸುಖವನ್ನು ಅನುಭವಿಸಲಾರನು. ಶಾಶ್ವತ ಸುಖಕ್ಕಾಗಿ ಜೀವ ದೇವರ ಸಮತೆಯಾಗ ಬೇಕು. ಇಲ್ಲವಾದರೆ ಜೀವನು ಕರ್ಮರೂಪವಾದ ಪ್ರಪಂಚದಲ್ಲಿ ಮತ್ತೆ ಮತ್ತೆ ಹುಟ್ಟ ಬೇಕು. ಕಾರ್ಯರಂಗದಲ್ಲಿ ನಿಂತು ವ್ಯವಹಾರ ಸಂಬಂಧದಿಂದ ಜೀವನದ ಕೋಟಲೆಗೆ ಸಿಕ್ಕಿ ಸಂಕಟಪಡಬೇಕು. ಪ್ರವೃತ್ತಿಗಳ ಬಲೆಯಲ್ಲಿ ಹೊರಳಾಡಬೇಕು. "ನಿವೃತ್ತ ನಾಗಬೇಕು, ಚಿರಶಾಂತಿ ಬೇಕು, ಶಾಶ್ವತ ಸುಖ ಬೇಕು"- ಎಂದು ಚಡಪಡಿಸುವುದೇ ಮೋಕ್ಷ ಜೀವನ. ಇದನ್ನೇ ಬಸವೇಶ್ವರನು ಇಲ್ಲಿ ನುಡಿದಿರುವನು. ಜನ್ಮಾಂತರದ ಕೋಟಲೆಗೆ ತಿಲಾಂಜಲಿ ಕೊಡುವ ಒಲ್ಮೆಯು ಆತನ ಹೃದಯದಲ್ಲಿ ಬಲವಾಗಿತ್ತು. ಅದನ್ನೇ ಪ್ರತಿಜ್ಞೆಯ ರೂಪದಲ್ಲೂ ಪ್ರಾರ್ಥನೆಯ ರೂಪದಲ್ಲೂ ಅಂದಿರುವನು. ಶ್ರೀ ಶಂಕರಾಚಾರ್ಯರು ಅಂದಿರುವ ಇದೇ ಭಾವವು ನೆನಪಿಗೆ ಬರುತ್ತದೆ. "ಪುನರಪಿ ಜನನಂ, ಪುನರಪಿ ಮರಣಂ, ಪುನರಪಿ ಜನನೀ ಜಠರೇಶಯನಂ, ಇಹಸಂಸಾರೇ ಖಲು ದುಸ್ತರೇ ಕೃಪಯಾ ಪಾರೆ ಪಾಹಿಮುರಾರೇ" ಎಂದು ಭವಾಂತರದ ಗೋಳನ್ನು ನೆನೆದು ಭಗವಾನನನ್ನು ಮೊರೆಹೊಕ್ಕಿರುವರು. ಭಗವಾನ್ ರಾಮಕೃಷ್ಣ ಪರಮಹಂಸರು ಧ್ಯಾನಮಾಡುವ ಭಾವನೆಯನ್ನು ಕುರಿತು ಪ್ರಶ್ನಿಸಲಾಗಿ ಇಂತೆಂದು ನುಡಿದಿರುವರು. "ದೇವಾ, ನಿನ್ನ ಕೃಪೆಯಿಂದ ಇದೇ ಜನ್ಮದಲ್ಲಿ, ಇದೇ ಕ್ಷಣಕ್ಕೆ ನನಗೆ ಪರಮ ಗತಿಯಾಗಬೇಕೆಂದು ದೇವರನ್ನು ಅನನ್ಯ ಭಾವದಿಂದ ಪ್ರಾರ್ಥಿಸಬೇಕು."- ಯೇಸು ಕ್ರಿಸ್ತನೂ ಇದೇ ರೀತಿ ನುಡಿದಿರುವನು. "And lead us not in to temptation, but deliver us from evil". ದುರಾಸೆಯ ಹಾದಿ ತೋರ ಬೇಡ, ಆದರೆ ಕೆಡುಕಿನಿಂದ ಪಾರುಗಾಣಿಸು. ಎಂದಿರುವ ಪ್ರಾರ್ಥನೆಯಾದರೂ, ಪ್ರವೃತ್ತಿಯನ್ನು ನಿವೃತ್ತಿ ಮಾಡೆಂದು ಬೇಡಿರುವ ಹೃದಯದ ಎಳೆಕರೆ.

ಮಹಾತ್ಮ ಅರವಿಂದ ಘೋಷರ ಈ ನುಡಿಗಳಾದರೂ ಇದೇ ವಿಧವಾದ ಭಾವನೆಯನ್ನು ಹೊರಗೆಡವುತ್ತಿವೆ. " Man is in Love with the bounds of birth, therefore he is caught in the companian bounds of death. In these chain he aspires after freedom of his being and mastery of his self fulfilment." ಸಾಧಾರಣ ಮನುಷ್ಯನು ಹುಟ್ಟಲು ಆಶಿಸುವನು. ಆದುದರಿಂದಲೇ ಮೃತ್ಯುವು ಅವನ ಬಳಿ ಸಾಗುವುದು. ಈ ಸೆರೆತನದಿಂದ ಹೊರತಾಗಿ ಆತ್ಮಸ್ವಾತ್ಯಂತ್ರ್ಯ ಹೊಂದಲು ಅವನು ಆಶಿಸುತ್ತಾನೆ ಎಂಬುದೇ ಇದರ ಭಾವ. ಬಸವೇಶ್ವರನು ಈ ಸ್ಥಿತಿಯ ಅನುಭವವನ್ನು ಇಂತು ನುಡಿದಿರುವನು. "ಎಲೈ ಪರಮಾತ್ಮನೇ ನೀನು ನನ್ನ ಗೋಳನ್ನು ಅರಿಯದೆ ಜನ್ಮಾಂತರಗಳಲ್ಲಿ ಬಳಲಿ ಬೆಂಡಾಗುವಂತೆ ತೊಳಲಿಸಿದೆ. ಹುಟ್ಟಿದ್ದು ನನ್ನ ತಪ್ಪಾಯಿತೇ? ಈ ಜನ್ಮದಲ್ಲಿಯಾದರೂ ದಯಮಾಡು. ನಿಮ್ಮಾಣೆಗೂ ಇನ್ನು ನಾನು ಹುಟ್ಟುವುದಿಲ್ಲ."

# ಶ್ರೀ ಕ್ಷೇತ್ರದಲ್ಲಿ ಸಂದರ್ಶಿಸಬೇಕಾದ ಸ್ಥಳಗಳು

ನಮಸ್ಕಾರ ಬನ್ನಿ ಸಿದ್ಧಗಂಗಾ ಪುಣ್ಯ ಕ್ಷೇತ್ರ. ಧರ್ಮದಾಗರ, ಸಿದ್ಧರು ಆಗಿ ಹೋದ ತಪೋ ಭೂಮಿ. ಶರಣರು ಮೆಟ್ಟಿದ ಧರೆ ಪಾವನ. 'ಸಿದ್ಧಗಂಗೆಯ ಊಟ ಶಿವಗಂಗೆಯ ನೋಟ'- ನಾಡಿನ ನಾಣ್ಣುಡಿ. ಶರಣ ಪರಂಪರೆಯಲ್ಲಿ ಅರಳಿದ ವಿರಕ್ತ ಮಠ. ಕಲ್ಯಾಣದ ಶೂನ್ಯ ಪೀಠದೊಡನೆ ಸಂಬಂಧ. ಹರದನಹಳ್ಳಿಯ ಪರಂಪರೆ. ಗೋಸಲ ಸಿದ್ಧೇಶ್ವರರ ಅನುಷ್ಠಾನ ಕಮ್ಮಟ. ಸಿದ್ಧರ ಸಿದ್ಧಿಯ ಕುರುಹು ಸಿದ್ಧಗಂಗಾ. ಕನ್ನಡನಾಡಿನುದ್ದಗಲದಲ್ಲಿ ಶ್ರೀ ಕ್ಷೇತ್ರದ ಹೆಸರು ಜನಜನಿತ. ಮುಮುಕ್ಷುಗಳ ಮುಕ್ತಿಕ್ಷೇತ್ರ. ಜಲವೆಲ್ಲ ನಿರ್ಜರಾಮೃತ. ಎದರುವ ಹರಳುಗಳೆಲ್ಲ ಚಿಂತಾಮಣಿ. ವನವೆಲ್ಲ ದೇವತರು. ಇದು ಸಿದ್ಧಲಿಂಗೇಶ್ವರರ ಅವಿಮುಕ್ತ ಕ್ಷೇತ್ರ. ಪುಣ್ಯ ಸಂಚಯಕ್ಕಾಗಿ ಬರುತ್ತಿರುವ ಯಾತ್ರಿಕನಿಗೆ ಸ್ವಾಗತ, ತುಂಬು ಹೃದಯದ ಸುಸ್ವಾಗತ.

ಅದೋ ನೋಡು! ಬೆಟ್ಟದ ಮೇಲೆ ಚೆಂಗಾವಿಯ ತ್ಯಾಗಧ್ವಜ. ಸಿದ್ಧಲಿಂಗೇಶ್ವರ ದೇವಾಲಯದ ಸಿರಿಕಳಶ ಕೈ ಬೀಸಿ ಕರೆಯುತ್ತಿದೆ. ಹತ್ತು, ಒಂದೊಂದೇ ಮೆಟ್ಟಿಲನ್ನೂ ಹತ್ತು. ಎಡಬಲದ ಶಿವನಾಮಾವಳಿಯನ್ನು ಜಪಿಸುತ್ತ ಮೇಲೇರು. ಮೆಟ್ಟಿಲು ಹತ್ತುವ ಮುನ್ನ ಎಡಬಲದ ದೇವ ಮಂದಿರಗಳಲ್ಲಿ ರಾರಾಜಿಸುತ್ತಿರುವ ದೇವಶಿಲ್ಪಿಗಳ ಸೌಂದರ್ಯವನ್ನು ಹೃದಯದೊಳು ತುಂಬಿಕೊಳ್ಳುವುದನ್ನು ಮರೆಯಬೇಡಿ. ಮೇಲೇರುವಾಗ ಒಂದು ಬದಿಗೆ ಬಾಲಗಣಪ, ಮತ್ತೊಂದು ಬದಿಗೆ ನವಗ್ರಹಗಳ ಸುಂದರ ವಿಗ್ರಹಗಳು, ಇನ್ನೂ ಮೇಲಕ್ಕೇರಿದರೆ ಶ್ರೀ ಸಿದ್ಧಲಿಂಗೇಶ್ವರರ ದೇಗುಲದ್ವಾರ. ಮೇಲೆ ಕಣ್ಣಪ್ಪ, ಎಡೆಯೂರ ಸಿದ್ಧಲಿಂಗೇಶ್ವರರ ಮುಂತಾದ ಸುಂದರ ವರ್ಣಚಿತ್ರಗಳು.

ಕೈಮುಗಿದು, ತಲೆಬಾಗಿ ಒಳಗೆ ಬಾ. ಸಿದ್ಧಲಿಂಗೇಶ್ವರ ದೇವಮಂದಿರದ ದ್ವಾರದ ಮೂಲಕ. ಅಮೃತಶಿಲೆಯ ಸ್ವಚ್ಛ ಆವಾರ, ಬೆಳ್ಳಿಯ ಬಾಗಿಲುವಾಡ, ಮಹಾಮೂರ್ತಿ ಸಿದ್ಧಲಿಂಗೇಶ್ವರರ ದೇವ ವಿಗ್ರಹ. ವಿವಿಧಾಲಂಕಾರಗಳ ಕಣ್ತಣಿಪ ಮನಮೋಹಕ ಮೂರ್ತಿ, ಮುಂದೆಯೇ ಗವಿ ಒಳಗೆ ಸಿದ್ಧಗಂಗಾ ಮಾತೆಯ ಪುಣ್ಯ ಶಿಲ್ಪ. ಅಲ್ಲಿಯೇ ಸಿದ್ಧಗಂಗಾ ತೀರ್ಥಕುಂಡ. ಪ್ರದಕ್ಷಿಣೆ ಬಾ, ಪಕ್ಕದಲ್ಲಿ ಭಕ್ತಾದಿಗಳಿಗೆ ಅನುಕೂಲಕರವಾದ ಸಾಲುಕೋಣೆ. ಭಕ್ತಿಯ ಕಾಣಿಕೆಯನ್ನರ್ಪಿಸು, ಇಳಿದು ಬಾ. ಹಳೆಯ ಮಠಕ್ಕೆ ಪರಮ ಪೂಜ್ಯರ ಶಿವಪೂಜಾ ಮಂದಿರ. ಹಳೆಯ ಸ್ವಾಮಿಗಳ ಕಾಲದಿಂದ ಇಲ್ಲಿಯೇ ಸ್ವಾಮಿಗಳ ಪೂಜೆ, ಪ್ರಸಾದ ಸ್ವೀಕಾರ. ಕಲ್ಲು ಕಟ್ಟಡ.

ಒಂದೊಂದು ಕಲ್ಲು ಕಂಬದ ಮೇಲೂ ಯೋಗಾಸನ ಮುದ್ರೆ ಶಿಲ್ಪ. ಭಿತ್ತಿಗಳ ಮೇಲೆ ವಚನ, ಜನಪದ ಮುಕ್ತಕಗಳ ಮುತ್ತಿನ ಬರಹ. ಚಿತ್ರಗಳ ಶರಣ ಪರಂಪರೆ. ಒಳಗೆ ಉದ್ದಾನ ಶಿವಯೋಗಿಗಳ ಅಮೃತಶಿಲಾ ಶಿಲ್ಪ; ಅದೂ ಮಂದಾಸನದ ಮಧ್ಯೆ, ಯೋಗ ಮುದ್ರೆಯ ಭಂಗಿ. ನಿಲುವುಗನ್ನಡಿಗಳಲ್ಲಿ ಬಂದವರ ಪ್ರತಿಬಿಂಬ. ಭಕ್ತಿ ಪ್ರತಿಬಿಂಬಿಸ ಬೇಕೆಂಬ ಉದ್ದೇಶ ಆಳೆತ್ತರದ, ತೋಳಗಲದ ಕನ್ನಡಿಗಳ ಆಸೆ, ಶ್ರೀ ಶ್ರೀ ಗಳವರಿಗೆ. ಪ್ರಸಾದ ಸಿದ್ಧತೆಯ ಪಾಕಶಾಲೆ, ತುಂಬಾ ಸರಳ. ಆಡಂಬರಕ್ಕಿಲ್ಲ ಅವಕಾಶ, ಸ್ನಾನದ ಮನೆ. ಮೂಗಿನ ಮೇಲೆ ಬೆರಳಿಡುವಷ್ಟು ಸಾಧಾರಣ ವ್ಯವಸ್ಥೆ, ಪೂಜಾ ಗೃಹ, ಪೂಜಾ ಪರಿಕರಗಳ ಶಿಸ್ತು, ಥಳ ಥಳ ಹೊಳೆಯುವಂತೆ ಜೋಡಿಸಿಟ್ಟ ಸುಂದರ ದೃಶ್ಯ, ಧೂಪದ ಸುಗಂಧ ಮೂಗಿಗೆ ತಾಕುತ್ತದೆ. ಒಳಹೊಕ್ಕು ಹೊರಗೆ ಬಂದೆಯಾ, ಸುತ್ತ ನೋಡು ಹೂವಿನ ತೋಟ, ಹರಿಹರ ಕವಿಯ ಪುಷ್ಪರಗಳೆಯಲ್ಲಿ ವರ್ಣಿಸಿದ ಚಿತ್ರಗಳ ನೆನಪಾಗದಿರದು. ದಾಸವಾಳ, ಸಂಪಿಗೆ, ನಂದಬಟ್ಟಲು, ಕಾಶಿಕಣಗಿಲೆ, ತುಂಬೆ, ಎಲ್ಲ ಶಿವಲಿಂಗ ಪುಷ್ಪ, ಬಿಲ್ವ, ಮರುಗ, ಶಿವಯೋಗಿಗಳ ಲಿಂಗಪೂಜೆಗೆ ತಾಮುಂದು ನಾಮುಂದು ಎಂಬ ಸ್ಪರ್ಧೆ, ಅಲ್ಲಿಂದ ಬರುವಾಗ ಬದಿಯಲ್ಲಿಯೇ ಉದ್ದಾನ ಸ್ವಾಮಿಗಳ ಗದ್ದುಗೆ. ತಪೋ ಮೂರ್ತಿಯ ಯೋಗಸಿದ್ಧಾಮುದ್ರೆ. ಅವರ ಆಶೀರ್ವಾದದ ಬೆಳಕೇ ಇಂದು ಎತ್ತೆತ್ತಲೂ ನಿತ್ಯ ಪೂಜೆ, ಗದ್ದುಗೆಗೆ. ಹೆಜ್ಜೆ ಹಾಕು, ಶಿವಯೋಗ ಮಂದಿರದ ನಿರ್ಮಾಣ. ಅತ್ಯಾಧುನಿಕ ರೀತಿಯ ವಿನೂತನ ಶಿಲ್ಪಮಂದಿರ. ಪ್ರಾಚೀನ ಅರ್ವಾಚೀನಗಳ ಮಧುರ ಸಂಗಮ. ಮುಂದೆ ಮತ್ತೊಂದು ಗದ್ದುಗೆ, ಅಲ್ಲಿಯೂ ಪೂಜೆ. ಹಾಗೆಯೇ ಮುಂದೆ ನಡೆ, ಕೆಂಪುಹೊನ್ನಯ್ಯನವರು ಕಟ್ಟಿಸಿದ ಅತಿಥಿ ಗೃಹ, ಆಧುನಿಕ ರೀತಿಯ ವಿಶ್ರಾಂತಿಧಾಮ, ಶ್ರೀ ಮಠಕ್ಕೆ ಬರುವ ಅತಿಥಿ ಮುಖ್ಯರಿಗೆ ಇಲ್ಲಿ ತಂಗುದಾಣ. ಸಾಲು ಮಂದಿರ ಅವೂ ಭಕ್ತಾದಿಗಳಿಗೆಂದೇ. ಒಂದೊಂದೂ ದಾನಿಗಳ ಮುಕ್ತ ಕೊಡುಗೆ.

ಮಠದ ಕಾರ್ಯಾಲಯ ನೋಡೋಣ. ವಿಶಾಲವಾದ ವ್ಯವಸ್ಥೆ, ಕಾರ್ಯನಿರತ ಸಿಬ್ಬಂದಿ, ಸೇವಾ ಬದುಕಿಗೆ ಸಂಕಲ್ಪ ಜೀವಿಗಳು ವೇಳೆಯ ಪರಿವೆಯಿಲ್ಲದ ದುಡಿಮೆ. ಸಾಲು ಸಾಲು ಮೇಜು, ಕುರ್ಚಿಗಳು, ಹಿಂಬದಿಗೆ ಬೀರುಗಳು, ಕಡತಗಳ ರಕ್ಷಾಸಂಪುಟಗಳು ಶ್ರೀ ಮಠದ ಇತಿಹಾಸ ಕವಚಗಳು, ಒಂದೊಂದೂ ಜೀವಂತ. ಪಕ್ಕದಲ್ಲಿಯೇ ಇದೆ ಪರಮ ಪೂಜ್ಯ ಶ್ರೀ ಶ್ರೀ ಗಳವರ ಕರ್ಮಕ್ಷೇತ್ರ, ಕಾಯಕದ ಗದ್ದುಗೆ. ಸ್ವಾಮೀಜಿಯ ಆಫೀಸ್. ಎತ್ತ ಕಣ್ಣಾಡಿಸಿದರೂ ಸೇವಾ ಪರಿಕರಗಳ ಪರಿಷೆ. ಹಂಡೆ, ಬಕೀಟು, ಸೌಟು, ತಟ್ಟೆ, ದೀಪ, ಜಮಖಾನ, ತರಕಾರಿ [ಭಕ್ತರು ತಂದುಕೊಟ್ಟದ್ದು] ಧ್ವನಿವರ್ಧಕ, ವಿಶಾಲ ಮೇಜು, ಮೇಲೆಲ್ಲ ಪತ್ರಗಳ ರಾಶಿ ರಾಶಿ. ಸಹಸ್ರ ವಿಧ ಅವೂ ಸಹ, ಗ್ರಂಥಗಳ ಸಾಲು ಸಾಲು, ಪೂಜ್ಯರು ಓದಿಗೆಂದೇ ಇಟ್ಟು ಕೊಂಡಂಥವು, ಸುತ್ತ ಗೋಡೆಯ ಮೇಲೆ ಶರಣರ, ಮಹಾಪುರುಷರ ಚಿತ್ರಾವಳಿ, ಎದುರಿಗೊಂದು

ಗಡಿಯಾರ, ದೂರವಾಣಿಯಂತ್ರ, ನೆಲಕ್ಕೆ ಹಾಸುಗಂಬಳಿ, ಪೀಠೋಪಕರಣಗಳು, ಸ್ವಾಮೀಜಿ ಮುಹೂರ್ತ ಮಾಡಿದ್ದಾರೆ ಅಲ್ಲಿ ನಮಸ್ಕರಿಸು, 'ಯಾವೂರು? ಊಟ ವಾಯಿತಾ? ಬಂದವರೆಲ್ಲರಿಗೆ ಸ್ವಾಮಿಗಳಿಂದ ಕ್ಷೇಮ ಸಮಾಚಾರದ ಈ ಮಾತುಗಳು ದೊಡ್ಡಬುದ್ಧಿಯವರ ದರ್ಶನವಾಯಿತಲ್ಲ. ಪಕ್ಕದಲ್ಲೇ ಇದೆ ನೋಡು ಚಿಕ್ಕ ಸ್ವಾಮಿಯವರ ಆಫೀಸ್. ಸ್ವಾಮಿಗಳಿದ್ದಾರೆ. ದೊಡ್ಡವರು ಕೈಹಿಡಿದು ಕರೆತಂದ ಕರುಣಾಳು ಬೆಳಕು ಅವರು. ಅವರ ಕಾರ್ಯಾಲಯದ ಪಕ್ಕದಲ್ಲಿಯೇ ಮತ್ತೊಂದು ದೊಡ್ಡ ಕೋಣೆ. ಅಲ್ಲಿ ಅನೇಕ ಪಾತ್ರೆ ಪರಡಿಗಳ, ದೇವರ ಉತ್ಸವಾದಿಗಳ ವಿವಿಧ ಗಾತ್ರದ, ವಿವಿಧ ರೂಪದ ಸಾಮಾನು ಸರಂಜಾಮು. ಅದೊಂದು ಅದ್ಭುತ ಲೋಕ.

ಇನ್ನು, ಮಠದ ಮುಂದೆಯೇ ಬಂದ ಭಕ್ತಾದಿಗಳಿಗೆಲ್ಲ ಮೊದಲು ಕಾಣುವ ಗದ್ದುಗೆ ಶಿವಯೋಗಿ ಅಟವೀಸ್ವಾಮಿಗಳವರದು, ಸಿದ್ಧಗಂಗೆಯ ಒಲೆ ಆರದಂತೆ ಹಚ್ಚಿ ಹೋದ ಪುಣ್ಯಮೂರ್ತಿ. ಅಲ್ಲಿ ನಿತ್ಯ ಪೂಜೆ, ಜಾತ್ರೆಯಲ್ಲಿ ಎಲ್ಲ ಉತ್ಸವಗಳು ಈ ಗದ್ದುಗೆಯ ಮುಂದೆಯೇ ಪ್ರಾರಂಭ ವಿಶಾಲ, ಎತ್ತರವಾದ ವೇದಿಕೆ, ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಮೀಸಲಿಟ್ಟ ಸ್ಥಳ ಇದು.

ಹೋಗೋಣ. ಅತಿಮುಖ್ಯ ನೋಡಲೇಬೇಕಾದ ಸ್ಥಳ ಶ್ರೀಮಠದಲ್ಲಿ. ಸಿದ್ಧಗಂಗೆಯ ಊಟ ಇಂದು ಗಾದೆ. ಅದನ್ನು ತಯಾರಿಸುವ ಪಾಕಶಾಲೆಗೆ ಬನ್ನಿ. ಅಬ್ಬ! ಅದೆಷ್ಟು ದೊಡ್ಡ ಕೊಪ್ಪರಿಗೆಗಳು, ಪಾತ್ರೆಗಳು, ಎಷ್ಟುದ್ದ ಊಟದಮನೆ, ಎಷ್ಟೊಂದು ಅಗಲ ಅನ್ನಿಸಿತಲ್ಲವೆ, ಇದೂ ಸಾಕಾಗುತ್ತಿಲ್ಲ. ದಾಸೋಹ ವ್ಯವಸ್ಥೆಗೆ ಇಲ್ಲಿನವಠ ಕೇಂದ್ರಗಮನ, ಇತ್ತೀಚಿಗೆ ಸ್ಟೀವ್ ಒಲೆಗಳ ಬಳಕೆ. ದಂಡಿಯಾಗಿ ದಾಸೋಹ. ಹಗಲಿಲ್ಲ, ಇರುಳಿಲ್ಲ. ಅದಕ್ಕೆ ಪ್ರಸಾದದ ಒಂದೊಂದು ಅಗುಳಿನ ಮೇಲೂ ಪರಮ ಪೂಜ್ಯ ಶ್ರೀ ಶ್ರೀ ಗಳವರ ದುಡಿತದ ಸೇವೆಯ ಪಂಚಾಕ್ಷರಿ ಮಂತ್ರ. ಅದಕ್ಕಾಗಿ ಸಾವಿರಾರು ಮೈಲಿಗಳಿಂದ ಬಂದ ಭಕ್ತಕೋಟಿ, ನೀಡಿ ತಣಿಯರು ಸ್ವಾಮಿಗಳು. ಇನ್ನೂ ನೀಡಬೇಕೆಂಬ ಆಸಕ್ತಿ ಅವರಿಗೆ. ಪ್ರಸಾದ ಸ್ವೀಕರಿಸು, ಮುಂದೆ ಹೋಗೋಣ. ವಿದ್ಯಾರ್ಥಿಗಳಿಗೆಂದೇ ಕಟ್ಟಿದ ವಿವಿಧ ಮಂದಿರಗಳು. ಮಾರ್ಕಂಡೇಯ ನಿಲಯ, ಲಿಂಗಮ್ಮನ ಭಕ್ತಿ, ಭೈರಮ್ಮಜ್ಜಿ ಕಟ್ಟಡ, ಜನರಲ್ ಹಾಸ್ಟೆಲ್, ಜಯನಿಲಯ, ಮಠದಮಹಡಿ, ಹಳೇಮಹಡಿ, ಮಾನವಮಿ ಮಂಟಪ, ಗೋಶಾಲೆ ಮುಂತಾಗಿ, ಮಠದ ಆಸ್ಪತ್ರೆ. ದೇವರಾಯಪಟ್ಟಣದ ಹಾದಿಯ ಬದಿಯಲ್ಲಿ ಇತ್ತ ನೋಡು. ಕಲ್ಯಾಣಿ. ಅಲ್ಲಿಯೇ ತೆಪ್ಪೋತ್ಸವ. ಸುತ್ತ ತೆಂಗು ಬಾಳೆಗಳ ಸುಂದರ ನೋಟ. ಅಗೋ ಅಲ್ಲಿ ಕಾಣುತ್ತಿದೆ ಆಡಿಟೋರಿಯಂ ಸಭಾಮಂದಿರ. ಸಿದ್ಧಗಂಗೆಯ ಸಂಖ್ಯೆಗೆ ಅದೂ ಚಿಕ್ಕದು. ಇತ್ತೀಚಿಗೆ ಅಲ್ಲಿ ಮದುವೆಗಳೂ ನಡೆಯಲು ಶ್ರೀಶ್ರೀಗಳು ಅವಕಾಶ ಕಲ್ಪಿಸಿದ್ದಾರೆ. ಪಕ್ಕದ ಕಟ್ಟಡವೇ ಶ್ರೀಶ್ರೀ ಗಳವರ ರಜತ ಮಹೋತ್ಸವ ಕಟ್ಟಡ.

ಅಲ್ಲಿ ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯ, ಮೇಲೆ ಹಳೆಯ ವಿದ್ಯಾರ್ಥಿಗಳ ಸಂಘದ ಕಾರ್ಯಾಲಯ, ಸಿದ್ಧಗಂಗಾ ಮಾಸಿಕ ಪತ್ರಿಕೆಯ ಕಾರ್ಯಾಲಯ, ಶ್ರೀ ಕ್ಷೇತ್ರದ ಗ್ರಂಥ ಭಂಡಾರ, ವಿಜಯಾ ಬ್ಯಾಂಕ್ ಶಾಖೆ, ಕ್ಷೇತ್ರದ ಕಾರ್ಯಾಲಯದ ಒಂದು ಶಾಖೆ, ಎದುರಿಗೇ ಅಂಧಮಕ್ಕಳ ಪಾಠಶಾಲೆ, ಅಲ್ಲಿ ಮತ್ತೊಂದು ಬೃಹತ್ ರೈಸ್ ಮಿಲ್, ಒಂದು ಕ್ಯಾಂಟೀನ್. ಕಾಫಿ ಬೇಕಾಯಿತೇನು! ಕುಡಿಯೋಣ ಕುಳಿತು.

ಎಲ್ಲ ನೋಡಿದ ತೃಪ್ತಿಯಾಯಿತಲ್ಲವೇ, ಮನಸ್ಸು ತುಂಬಿ ಬಂತಲ್ಲವೇ. ಇದೇ ನೋಡು ಧರ್ಮಕ್ಷೇತ್ರಗಳ ದರ್ಶನದಿಂದಾಗುವ ಭಾಗ್ಯ.

ಜಾತ್ರೆಯ ಸಮಯಕ್ಕೆ ಬಂದಿದ್ದೀಯೆ, ವಸ್ತುಪ್ರದರ್ಶನ, ಶ್ರೀ ದರ್ಶನಮಂಟಪ ನೋಡದೇ ಹೋಗುವಿಯೇನು? ಏಳು ಅವನ್ನೂ ನೋಡೋಣ. ಎಷ್ಟೊಂದು ಅದ್ಭುತ ವಿಸ್ಮಯ ಜಗತ್ತು ಅವು! ರಾಷ್ಟ್ರದ ಪ್ರಗತಿಯ ಒಂದು ಕಿರುನೋಟ ಅಲ್ಲಿದೆ. ಶ್ರೀ ಶ್ರೀ ಗಳವರ ತಪೋಜೀವನದ ವಿವಿಧ ಹಂತಗಳ ಸಹಸ್ರಾರು ಭಾವಚಿತ್ರ ಸಂಗ್ರಹ ಶಾಲೆ, ಶ್ರೀ ದರ್ಶನಮಂಟಪ. ನೋಡಿಯಾಯಿತೇ. ಧನ್ಯ, ನೀನು ಮಾಡಿದ ಈ ಯಾತ್ರೆ. ಕೊನೆಯದಾಗಿ, "ಅನುಭವವು ಸಿಹಿಯಲ್ಲ, ಅದರ ನೆನಪೇ ಸವಿಯು"

"ಮತ್ತೊಮ್ಮೆ ಬಾ, ನಮಸ್ಕಾರ"

## "ಸಿದ್ಧಗಂಗಾ" ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

1041 ಶ್ರೀ ಶ್ರೀ ಪರದೇಶೀಕೇಂದ್ರ ಸ್ವಾಮಿಗಳು. ಕೆರಗೋಡಿ ರಂಗಾಪುರ, ತಿಪಟೂರು ತಾ|| ತುಮಕೂರು ಜಿಲ್ಲೆ.

1042 ಶ್ರೀ ರಾಜು S/o ಶ್ರೀ ಹೆಚ್. ಜಯಶೆಟ್ರು, ಬಟ್ಟೆ ವ್ಯಾಪಾರಿಗಳು, ಬಿಡದಿ, ರಾಮನಗರ ತಾ|| ಬೆಂಗಳೂರು ಜಿಲ್ಲೆ.

1043 ಶ್ರೀ ಬಿ. ಎಸ್. ವಿರೂಪಾಕ್ಷಯ್ಯ, ಅಡ್ವೋಕೇಟ್, ಕಾರ್ಸ್ಟೌನ್, ಬೆಂಗಳೂರು – 5.

1044 ಶ್ರೀ ಎ. ನಾಗರಾಜು, ಎಂ. ಎ. ಬಿ. ಇಡಿ. ಎಂ. ಕಬ್ಬೆಹುಂಡಿ, ಟಿ. ಎನ್. ಪುರ ತಾ|| ಮೈಸೂರು ಜಿಲ್ಲೆ.

1045 ಶ್ರೀ ಎಸ್. ಆರ್. ಬೀಳಗಿ, ಕ್ಲಾತ್ ಮರ್ಚೆಂಟ್, ಬಿಜಾಪುರ.

1046 ಶ್ರೀ ಹೆಚ್ ಸಿ. ಬಸವರಾಜು, ಮಾಗಡಿರೋಡ್, ಬೆಂಗಳೂರು–79

1047 ಶ್ರೀ ಹೆಚ್. ಪಿ. ಶಿವಪ್ರಕಾಶ್ S/o ಶ್ರೀ ಹೆಚ್. ಬಿ. ಪುಟ್ಟಸ್ವಾಮಪ್ಪ, ಶೇಷಾದ್ರಿಪುರಂ, ಬೆಂಗಳೂರು – 20.

1048 ಶ್ರೀ ಹೆಚ್. ಎಸ್. ಶಿವಣ್ಣ, ವ್ಯಾಪಾರಿಗಳು, ಕೆ. ಆರ್. ಎಕ್ಸ್ಟೆನ್ಷನ್, ತುಮಕೂರು.

1049 ಡಾ|| ಶ್ರೀ ಜಿ. ಎಲ್. ಸಿದ್ಧಲಿಂಗಯ್ಯ, ಅಸಿಸ್ಟೆಂಟ್ ಡೈರೆಕ್ಟರ್, ತಿಪಟೂರು, ತುಮಕೂರು ಜಿಲ್ಲೆ.

1050 ಶ್ರೀ ಎಂ. ಶಿವಣ್ಣ ಬಿ. ಡಿ. ಓ., ಕೆ. ಆರ್. ಎಕ್ಸ್ಟೆನ್ಷನ್, ತಿಪಟೂರು, ತುಮಕೂರು ಜಿಲ್ಲೆ.

[ಮುಂದುವರಿಯುತ್ತದೆ]

# ಹಳೆಯ ವಿದ್ಯಾರ್ಥಿಗಳ ಸಂಘಕ್ಕೆ 'ಶಾಶ್ವತ' ಸದಸ್ಯತ್ವ ಪಡೆದಿರುವವರು

**ಸರ್ವಶ್ರೀ:-**

66 ಸಿದ್ಧಲಿಂಗಯ್ಯ; ಉಪಾಧ್ಯಾಯರು, ಕೆಂಬಳಲು ಮತ್ತು ಅಂಚೆ, ಹೆಬ್ಬೂರು ಮಾರ್ಗ, ತುಮಕೂರು ತಾಲ್ಲೂಕು.

67 ಕೆ, ಎಸ್. ಶಿವಕುಮಾರಯ್ಯ, ನಂ. 1593, ಪೂರ್ವ ಕೊನೆಯ ರಸ್ತೆ, 9ನೇ ವಿಭಾಗ, ಜಯನಗರ ಬೆಂಗಳೂರು –69.

68 ಹೆಚ್. ಎಲ್. ಶಿವರುದ್ರಪ್ಪ, ಗಡಿಯಾರ ಕಾರ್ಖಾನೆ S/o ಲಿಂಗಪ್ಪ. ಕೆ. ಆರೋನಹಳ್ಳಿ, ಭೀಮಸಂದ್ರ ಅಂಚೆ; ತುಮಕೂರು ತಾಲ್ಲೂಕು

69 ಬಿ. ಎನ್. ನಾಗಣ್ಣ, ಉಪಾಧ್ಯಾಯರು, ಹಿರಿಯ ಬಾಲಕರ ಪ್ರಾಥಮಿಕ ಶಾಲೆ, ರಾಮಲಿಂಗಾಪುರ, ಶಿರಾ ತಾಲ್ಲೂಕು.

70 ಬಿ. ರೇಣುಕಾರಾಧ್ಯ, ನಿವೃತ್ತ ಸಹಾಯಕ ಅಭಿಯಂತರು, ನಂ. 579, ಮಹಾಲಕ್ಷ್ಮಿ ಲೇಔಟ್, ಬೆಂಗಳೂರು – 560050.

71 ಎಮ್. ಮರಿದೇವರು, ನಿವೃತ್ತ ಜಿಲ್ಲಾಧಿಕಾರಿ(ಎಕ್ಸೈಸ್), ನಂ. 29, 4ನೇ ವಿಭಾಗ, ರಾಜಾಜಿನಗರ, ಬೆಂಗಳೂರು – 10.

72 ಕೆ. ಎಸ್. ರಾಜಯ್ಯ, ನಂ. 378/ಎಚ್, 9ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - 40.

73 ಎಚ್. ಇ. ಚಂದ್ರಪ್ಪಗೌಡ, ಮಸವಳ್ಳಿ, ಅಲಸಲಗೆ ಅಂಚೆ, ಸಕಲೇಶಪುರ ತಾಲ್ಲೂಕು.

74 ಆರ್. ಬಿ. ಅಯ್ಯಣ್ಣ, ನಂ. 35, ಮೊದಲನೇ ಕ್ರಾಸ್, ಸುಬ್ಬಣ್ಣಾಚಾರ್ ಬೀದಿ, ಕಾಟನ್‌ಪೇಟೆ, ಬೆಂಗಳೂರು - 560053.

75 ಎಮ್. ಆರ್. ಸಿದ್ಧಲಿಂಗಪ್ಪ, ಬೆಟ್ಟದಹಳ್ಳಿ, ಮತ್ತಿಕೆರೆ ಅಂಚೆ, ಗುಬ್ಬಿ ತಾಲ್ಲೂಕು.

[ಮುಂದುವರಿಯುತ್ತದೆ]

## ಅಭಿನಂದನೆ

ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರೂ, ಕನ್ನಡನಾಡಿನ ಸುಪ್ರಸಿದ್ಧ ಕವಿಗಳೂ, ವಿಮರ್ಶಕರೂ ಆದ ಡಾ|| ಜಿ. ಎಸ್. ಶಿವರುದ್ರಪ್ಪನವರ "ಕಾವ್ಯಾರ್ಥ ಚಿಂತನ" ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕ್ಯಾಡೆಮಿ ಪ್ರಶಸ್ತಿ ಬಂದಿದೆ. ಈ ಶುಭ ಸಂದರ್ಭದಲ್ಲಿ ಶ್ರೀಯುತರನ್ನು 'ಸಿದ್ಧಗಂಗಾ' ಅಭಿನಂದಿಸಲು ಸಂತೋಷಿಸುತ್ತಿದೆ.

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.